# ಗಾದೆಗಳ ಜ್ಞಾನ



ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (88) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

www.thraithashakam.org





# ಗಾದೆಗಳ ಜ್ಞಾನ


ಗ್ರಂಥಕರ್ತ : **ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (88) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 39 ಪ್ರಥಮ ಮುದ್ರಣ : ಮೇ–2017

ಪ್ರತಿಗಳು : 1000 **ಬೆಲೆ. 85/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆಗಳು–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಿ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ–ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾ ಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧಿ ಬೋಧನೆ.
34. ಸುಪ್ರಸಿದ್ಧಿಬೋಧನೆ.
35. ಶಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವ ಗ್ರಂಥದಲ್ಲಿ ವಜ್ರವಾಕ್ಯಗಳು
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲು ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು–ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು–ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ
93. ಪ್ರಾಥಮಿಕ ಜ್ಞಾನ
94. ರಾಜಕೀಯ  ರಾಜಕೀಯ
95. ಉಗ್ರವಾದ ಸತ್ಯಕ್ಕೋಸ್ಕರವೇ
96. ಒಬ್ಬ ವ್ಯಕ್ತಿಯಲ್ಲಿ ಎರಡು ಕೋನಗಳು
97. ಮಾನವತ್ವ
98. ದ್ಯಾನ – ಪ್ರಾರ್ಥನೆ – ನಮಾಜ್



04
# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
     ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಗ್ರಾಹಿತ ಶಕ್ತಿ
121. ಭೌತಿಕಮು – ಅಭೌತಿಕಮು
122. ದೇವುನಿ ಆಜ್ಞ ಮರಣಂ
123. ಮತ ಸಾಮರಸ್ಯಂ
124. ಮೋಕ್ಷಮು – ಮೋಸಮು
125. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

---

**ಸೂಚನೆ** : ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

**(ಇಂದೂ ಜ್ಞಾನ ವೇದಿಕೆ ಸದಸ್ಯರು)**

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635, 7619545963, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ), ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ, ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ), ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ, ರಾಯಚೂರು (ಜಿ) Cell :**9632418716**

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ (ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾನಗರ, ತೋಣಚಿಕೊಪ್ಪಲ್, ಮೈಸೂರ್
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮುಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಪ್ರಕಾಶ್ ರೆಡ್ಡಿ**
ಸೆಲ್:9845656774,9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ), ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

**ತಪ್ಪದೆ ಓದಿರಿ!** **ಓದಿಸಿರಿ!!**

## ಪ್ರಥಮ ದೈವ ಗ್ರಂಥ

# ತ್ರೈತ ಸಿದ್ಧಾಂತ ಭಗವದ್ಗೀತೆ

**(578 ಶ್ಲೋಕಗಳ ವಚನ ಗ್ರಂಥ)**

ಇದು ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಪ್ಲವಾತ್ಮಕ ತಿರುವು ತಿರುಗಿದ ಭಗವದ್ಗೀತೆ. 55 ಶ್ಲೋಕಗಳಿಗೆ ಪೂರ್ತಿ ಭಾವ ಬದಲಾವಣೆಯೊಂದಿಗೆ ತಯಾರಾಗಿದೆ. ಮೂರು ಆತ್ಮಗಳನ್ನು ಕುರಿತು ಶಾಸ್ತ್ರಾಧಾರದಿಂದ ವಿವರಿಸಿ ಬೋಧಿಸಿದ ಮೊಟ್ಟ ಮೊದಲ ಭಗವದ್ಗೀತೆ. ಮೊದಲು ಎಷ್ಟೋ ಜನರು ಬರೆದ ಭಗವದ್ಗೀತೆಗಳಿಗೆ ನೂರಕ್ಕೆ 90ರಷ್ಟು ವಿಭಿನ್ನ ಭಾವಗಳಿಂದ ಕೂಡಿಕೊಂಡಿದೆ. ಎಷ್ಟೋ ಪ್ರತ್ಯೇಕ ಅರ್ಥಗಳೊಂದಿಗೆ ದೇವರು ಹೇಳಿದ ನಿಜ ಭಾವಗಳನ್ನು ಹೇತುಬದ್ಧವಾಗಿ ವಿವರಿಸಿರುವುದು ಮತ್ತು ಹೇತುವಾದಿಗಳು ಸಹ ಖಂಡಿಸಲಾರದ ಭಗವದ್ಗೀತೆ ಇದು ಒಂದೇ. ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲ ಎನ್ನುವುದು, ಹತ್ಯೆಯನ್ನು ವಿವರಿಸಿ ಆತ್ಮಹತ್ಯೆಯಾಗಿ ಹಾಗೆಯೇ ಆತ್ಮಹತ್ಯೆಯನ್ನು ಹತ್ಯೆಯಾಗಿ ಹೇಳುವುದು, ಇಂತಹವು ಬಹಳ ಜನರಿಗೆ ಸಹಿಸಿಕೊಳ್ಳಲಾರದಂತಹ ವಿಪ್ಲವಾತ್ಮಕ ಹಾಗೂ ಸಂಚಲನ ವಿಷಯಗಳೆಷ್ಟೋ ಈ ಗ್ರಂಥದಲ್ಲಿ ಇವೆ. ಶ್ರೀಕೃಷ್ಣನ ಯಥಾರ್ಥ ಭಾವವನ್ನು ತಿಳಿಸಿ, ವಾಸ್ತವ ಜ್ಞಾನ ಪಥದಲ್ಲಿ ನಡೆಸಿ, ಮೋಕ್ಷಗಮ್ಯವನ್ನು ಸೇರಿಸುವುದು ಈ ಗ್ರಂಥ ರಾಜ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಗಾದೆಗಳ ಜ್ಞಾನ



ಪೂರ್ವದಲ್ಲಿ ಒಂದು ದೇಶದಲ್ಲಿ ಎಷ್ಟೋ ರಾಜ್ಯಗಳಿರುತ್ತಿದ್ದವು. ಆ ರಾಜ್ಯಗಳಿಗೆ ರಾಜರೂ ಇರುತ್ತಿದ್ದರು. ಒಂದು ಕಡೆ ಪಕ್ಕ ಪಕ್ಕದಲ್ಲಿಯೇ ಎರಡೂ ಸಮಾನ ವಿಸ್ತೀರ್ಣಗಳಿರುವ ರಾಜ್ಯಗಳಿದ್ದವು. ದೇಶದಲ್ಲಿ ಆ ಎರಡು ರಾಜ್ಯಗಳೇ ದೊಡ್ಡದಾಗಿದ್ದವು. ಎರಡು 'ರಾಜ್ಯಗಳಲ್ಲಿ ಒಂದು ರಾಜ್ಯದ ಉದ್ದವಾಗಿರುವಾಗ, ಮತ್ತೊಂದು ರಾಜ್ಯ ಅಗಲವಾಗಿ ಇರುತ್ತಿತ್ತು. ಉದ್ದವಾಗಿರುವ ರಾಜ್ಯದ ಹೆಸರು ಲಂಬೂ ಎಂದು ಇರುವಾಗ, ಅಗಲವಾಗಿರುವ ರಾಜ್ಯ ಆರಡಿ ರಾಜ್ಯವೆಂದು ಕರೆಯಲ್ಪಡುತ್ತಿತ್ತು. ಲಂಬೂ ರಾಜ್ಯಕ್ಕು, ಆರಡಿ ರಾಜ್ಯಕ್ಕು ಒಂದುಸಲ ಯುದ್ಧ ಬಂದಿದೆ. ಲಂಬೂ ರಾಜ್ಯದಲ್ಲಿ ಸೈನಿಕರು ಹತ್ತುಸಾವಿರ ಜನ ಇರುವಾಗ, ಆರಡಿ ರಾಜ್ಯದಲ್ಲಿ ಸೈನಿಕರು ಹನ್ನೊಂದು ಸಾವಿರಜನ ಇದ್ದಾರೆ. ಎರಡು ರಾಜ್ಯಗಳ ಸರಹದ್ದಿನಲ್ಲಿರುವ ಬಯಲುಪ್ರದೇಶವನ್ನು ಯುದ್ಧಭೂಮಿಯಾಗಿ ಆರಿಸಿಕೊಂಡು ಅಲ್ಲಿ ಯುದ್ಧವನ್ನು ಮಾಡಬೇಕೆಂದುಕೊಂಡಿದ್ದಾರೆ. ಪೂರ್ವದಲ್ಲಿ ಹಗಲು ಕಾಲದಲ್ಲಿ ಕೆಲವು ಗಂಟೆಗಳು ಮಾತ್ರ ಯುದ್ಧ ಮಾಡುತ್ತಿದ್ದರು. ಆ ನಿಯಮದ ಪ್ರಕಾರ ಎಂಟು ಗಂಟೆಗಳು ಮಾತ್ರವೇ ಯುದ್ಧ ಮಾಡುವುದಕ್ಕೆ ನಿಶ್ಚಯಿಸಿಕೊಂಡಿದ್ದಾರೆ. ಯುದ್ಧ ಶುರುವಾಗಿ ಎರಡು ದಿನಗಳಾಗಿದೆ. ಆರಡಿ ರಾಜ್ಯವೊಂದರ ಸೈನಿಕರು ಹನ್ನೊಂದುಸಾವಿರವಾಗಿದ್ದು, ಲಂಬೂ ರಾಜ್ಯವೊಂದರ ಸೈನಿಕರು ಹತ್ತುಸಾವಿರ ಮಾತ್ರವೇ ಇರುವುದರಿಂದ, ಲಂಬೂ ರಾಜ್ಯದವರು ಸೋತುಹೋಗುತ್ತೇವೇನೊ ಎಂದು ಅಂದುಕೊಂಡಿದ್ದಾರೆ. ಸೋತುಹೋಗುವ ಸ್ಥಿತಿ ತಮಗೆ ಬಾರದಂತೆ ಲಂಬೂ ರಾಜ್ಯಸೈನ್ಯಾಧಿಪತಿ ತಮ್ಮ ಗೂಢಚಾರರನ್ನು ಆರಡಿ ಸೈನ್ಯದೊಳಗೆ ಕಳುಹಿಸಿ, ಆ ಸೈನ್ಯವೊಂದರ ರಹಸ್ಯಗಳನ್ನು ತಿಳಿದು ಕೊಳ್ಳಬೇಕೆಂದುಕೊಂಡಿದ್ದಾರೆ. ಆರಡಿ ರಾಜ್ಯಸೈನ್ಯಾಧಿಪತಿ ಮೊದಲೇ ತನ್ನ ಗೂಢಚಾರರನ್ನು ಲಂಬೂ ಸೈನ್ಯದೊಳಗೆ ಕಳಿಸಿರುವುದರಿಂದ, ಲಂಬೂ ರಾಜ್ಯ ಸೈನ್ಯಾಧಿಪತಿ ಒಂದರ ಪಥಕ (ಸಂಚು) ಮೊದಲೇ ಆರಡಿ ಸೈನ್ಯಾಧಿಪತಿಗೆ ತಿಳಿದುಹೋಗಿದೆ. ಆಗ ಆರಡಿ ರಾಜ್ಯ ಸೈನ್ಯಾಧಿಪತಿ ತಮ್ಮ ಸೈನ್ಯದೊಳಗಿನವರಿಗೆ, ಹೊಸ ವ್ಯಕ್ತಿಗಳನ್ನು ಕಂಡುಕೊಳ್ಳುವುದಕ್ಕೆ ಒಂದು ಉಪಾಯವನ್ನು ಹೇಳಿದ್ದಾನೆ. ತಮ್ಮ ಸೈನ್ಯದಲ್ಲಿ ಪ್ರತಿ ದಿನ ಒಂದು ಹೊಸಪದವನ್ನು ಗುರುತಾಗಿಡುವುದು ನಡೆದಿದೆ. ಆ ಗುರುತು ತಮ್ಮ ಸೈನ್ಯದವರಿಗೆ ಮಾತ್ರವೇ ತಿಳಿದಿದೆ. ಇತರರಿಗೆ

ತಿಳಿದಿಲ್ಲ. ಆದ್ದರಿಂದ ತಮ್ಮ ಸೈನ್ಯದಲ್ಲಿ ಮನುಷ್ಯನಾದರೂ ಕೆಲವು ಮುಖ್ಯವಾದ ಸ್ಥಳಗಳೊಳಗೆ ಬಂದಾಗ ತಾವು ಮೊದಲೇ ಆ ದಿನಕ್ಕೆ ಗುರುತಾಗಿ ಹೇಳಿರುವ ಪದವನ್ನು ಕೇಳುತ್ತಿದ್ದರು. ಆಗ ತಮ್ಮ ಸೈನ್ಯದಲ್ಲಿನ ಸೈನಿಕನಾದರೆ ಆ ಗುರುತನ್ನು ಹೇಳುತ್ತಾನೆ. ಹಾಗಲ್ಲದೆ ಬೇರೆ ರಾಜ್ಯ ಸೈನಿಕನು ಗೂಢಚಾರಿಯಾಗಿ ಬಂದಿದ್ದರೆ, ಗುರುತಿಗೆ ಹೇಳಿರುವ ಪದವನ್ನು ಹೇಳಲಾರದೆ ಹೋಗುತ್ತಾನೆ. ಆಗ ಆತನು ಶತ್ರು ಸೈನ್ಯ ಗೂಢಚಾರಿಯೆಂದು ಸುಲಭವಾಗಿ ಕಂಡುಹಿಡಿಯಬಹುದು. ಈ ವಿಧಾನವನ್ನು ಅನುಸರಿಸುತ್ತಾ, ಪ್ರತಿ ದಿನ ಉದಯವೇ ತಮ್ಮ ಸೈನ್ಯಕ್ಕೆ ಒಂದು ರಹಸ್ಯಪದವನ್ನು ಹೇಳುತ್ತಿದ್ದರು. ಆ ರಹಸ್ಯಪದ ಆ ದಿನಕ್ಕೆಲ್ಲ ಗುರುತಾಗಿ ಇರುತ್ತಿತ್ತು. ಆ ಗುರುತು ಆರಡಿ ಸೈನ್ಯಕ್ಕೆ ಮಾತ್ರ ತಿಳಿಯುವುದರಿಂದ ಯಾರಮೇಲಾದರೂ ಅನುಮಾನ ಬಂದಾಗ, ತಮ್ಮವನಾ ಅಲ್ಲವಾ ಎಂದು ತಿಳಿದುಕೊಳ್ಳುವುದಕ್ಕೆ ರಹಸ್ಯ ಗುರುತನ್ನು ಕೇಳಿ, ಗುರುತನ್ನು ಹೇಳಲ್ಪಟ್ಟರೆ ತಮ್ಮವನೆಂದು, ಗುರುತನ್ನು ಹೇಳಲಾರದೆಹೋದರೆ ಶತ್ರು ಸೈನ್ಯದವನೆಂದು ತಿಳಿಯಲ್ಪಡುತ್ತಿದ್ದರು.

ಈ ಕಾಲದಲ್ಲಿ ಕಂಪ್ಯೂಟರ್‌ಗಳಲ್ಲಿ ರಹಸ್ಯವಾಗಿ ಒಂದು ಪದವನ್ನಿಟ್ಟು, ಆ ಪದವನ್ನು ಟೈಪ್ ಮಾಡಿದಾಗಲೇ ಫೈಲ್ ಬರುವಂತೆ ಕಂಪ್ಯೂಟರ್‌ನಲ್ಲಿ ಅಳವಡಿಸಿದ್ದಾರೆ. ಕಂಪ್ಯೂಟರ್‌ನಲ್ಲಿ ಪಾಸ್‌ವರ್ಡ್ ಎಂದು ಒಂದು ಪದವನ್ನು ಇಟ್ಟು, ಆ ಪದ ತಿಳಿದವರಿಗೇ ಕಂಪ್ಯೂಟರ್ ಓಪೆನಾಗುವಂತೆ (ಕೆಲಸ ಮಾಡುವಂತೆ) ಅಳವಡಿಸಿದಂತೆ, ಸೈನಿಕರಲ್ಲಿ ಪಾಸ್‌ವರ್ಡ್‌ನಂತಹ ಒಂದು ರಹಸ್ಯಪದವನ್ನು ಗುರುತಾಗಿಟ್ಟು, ಆ ಪದ ಗುರುತನ್ನು ಹೇಳಿದವನಿಗೇ ಕೆಲವು ದ್ವಾರಗಳಲ್ಲಿ ಪ್ರವೇಶ ಇರುವಂತೆ ಮಾಡಿರುತ್ತಾರೆ. ರಹಸ್ಯ ಗುರುತುಗಳನ್ನು ತಿಳಿದವನನ್ನು ತಮ್ಮವನೆಂದು, ತಿಳಿಯದವನನ್ನು ಶತ್ರುಸೈನ್ಯದವನೆಂದು ಗುರುತಿಸುತ್ತಿದ್ದರು. ಈ ದಿನ ಭಾರತ ಸೈನ್ಯದಲ್ಲಿ ಕೂಡಾ ರಹಸ್ಯಪದ (ಸಿಕ್ರೆಟ್‌ವರ್ಡ್) ವನ್ನು ವಿನಿಯೋಗಿಸುತ್ತಿದ್ದಾರೆ. ರಹಸ್ಯ ಪದವನ್ನು, ಪ್ರತಿ ದಿನ ಬೇರೆಬೇರೆಯಾಗಿ ಇರುವಂತೆ, ಆ ದಿನವೊಂದರ ರಹಸ್ಯ ಪದ ತಮ್ಮ ಸೈನ್ಯಕ್ಕೆ ಮಾತ್ರ ತಿಳಿಯುವಂತೆ ಅಳವಡಿಸಿಕೊಳ್ಳುತ್ತಿದ್ದರು. ಕೆಲವು ನಿಷಿದ್ಧ ಪ್ರಾಂತದೊಳಗೆ ಕೆಲವರು ಮಾತ್ರವೇ ಬರುವಂತೆ, ಅಲ್ಲಿಗೆ ಬರಬೇಕಾದವರಿಗೆ ಮಾತ್ರವೇ ಒಂದು

ಗುರುತನ್ನು ಹೇಳಿರುತ್ತಾರೆ. ಅಲ್ಲಿಗೆ ಹೋದವರು ಆ ಗುರುತನ್ನು ಹೇಳಿದಾಗಲೇ ಅವನು ಅಲ್ಲಿಗೆ ಬರಬೇಕಾದವನೆಂದು ಉಳಿದವರಿಗೆ ತಿಳಿದುಹೋಗುತ್ತದೆ. ಅಲ್ಲಿಗೆ ಹೋಗಿ ರಹಸ್ಯ ಗುರುತನ್ನು ಹೇಳಲಾರದೆಹೋದರೆ ಅಲ್ಲಿನ ಕಾವಲುದಾರರು, ಬಂದವನು ತಮ್ಮವನು ಅಲ್ಲವೆಂದು ಗ್ರಹಿಸಿ, ಅವನನ್ನು ಅಲ್ಲಿಗೆ ಹೋಗಿರುವುದಕ್ಕೆ ನಿರ್ಭಂದಿಸುತ್ತಾರೆ. ಈ ವಿಧವಾಗಿ ಸೈನ್ಯದಲ್ಲಾಗಲಿ, ರಹಸ್ಯ ಪ್ರಾಂತಗಳಲ್ಲಾಗಲಿ ಸಿಕ್ರೇಟ್‌ವರ್ಡ್‌ನ್ನು ಜಾರಿಯಲ್ಲಿ ಇಟ್ಟುಕೊಂಡಿದ್ದಾರೆ.

ಪ್ರಸ್ತುತ ಕಾಲದಲ್ಲಿ ಯಂತ್ರಗಳ ವಿನಿಯೋಗ ಹೆಚ್ಚಾಗಿ ಹೋಗಿದೆ. ವಯರ್‌ಲೆಸ್ ಮೂಲಕ (ರೇಡಿಯೋ ಮೂಲಕ) ಎಷ್ಟುದೂರದಿಂದಾದರೂ ಮಾತನಾಡಿಕೊಳ್ಳುವುದು ನಡೆಯುತ್ತಿದೆ. ಸೈನ್ಯದಲ್ಲಿ ಸೈನಿಕರು ಒಂದು ಪ್ರಾಂತದಿಂದ ಮತ್ತೊಂದು ಪ್ರಾಂತಕ್ಕೆ ರೇಡಿಯೋ ಮೂಲಕ ಯುದ್ಧ ಸಮಯದಲ್ಲಿ ಮಾತನಾಡಬೇಕಾಗಿ ಬಂದಾಗ, ಆ ಮಾತುಗಳನ್ನು ಶತ್ರುಗಳು ಕೇಳಿಸಿಕೊಂಡರೂ ಅರ್ಥವಾಗದಂತೆ ಭಾಷೆಯನ್ನು ತಯಾರು ಮಾಡಿರುತ್ತಾರೆ. ಸೈನ್ಯದಲ್ಲಿ ರೇಡಿಯೋ ಮೇಲೆ ಕೆಲಸಮಾಡುವ ವಯರ್‌ಲೆಸ್ ಆಪರೇಟರ್‌ಗಳು ಮಾತ್ರ, ಮಾತನಾಡುವ ವಿಧಾನವನ್ನು ಪ್ರತ್ಯೇಕವಾಗಿ ಕಲಿತಿರುತ್ತಾರೆ. ಉದಾಹರಣೆಗೆ, ಅವರ ಭಾಷೆ ಹೇಗಿರುತ್ತದೆಂದರೇ, ಒಬ್ಬ ಸೈನಿಕನು ತನಗೆ ನೀರು ಬೇಕೆಂದು ನೀರನ್ನು ಕುರಿತು ಕೇಳಬೇಕಾಗಿ ಬಂದಾಗ, "ನನಗೆ ನೀರು ಬೇಕು" ಎಂಬ ಮಾತನ್ನು "ವಿಮಾನ ಬರಬೇಕು" ಎಂದು ಹೇಳುತ್ತಾನೆ. ರೇಡಿಯೋದಲ್ಲಿ ಆ ಮಾತುಕೇಳಿದ ಬೇರೆ ಪ್ರಾಂತದಲ್ಲಿನ ಸೈನಿಕನಿಗೆ 'ವಿಮಾನ' ಎಂದರೇ ನೀರೆಂದು, 'ಬರಬೇಕು' ಎಂದರೇ 'ಬೇಕು' ಎಂದು ಅರ್ಥ ತಿಳಿದಿರುವುದರಿಂದ ಅವನು ಹೇಳಿದ ವಿಷಯ ಇವನಿಗೆ ಅರ್ಥವಾಗಿಹೋಗುತ್ತದೆ. ಒಂದುವೇಳೆ ಅದೇ ಮಾತನ್ನು ಶತ್ರುಸೈನ್ಯಗಳು ತಮ್ಮ ರೇಡಿಯೊ ಮೂಲಕ ಕೇಳಿದರೂ, ಕೇಳಿದ ಮಾತಿನಲ್ಲಿನ ಅಸಲು ವಿಷಯ ಗೊತ್ತಿಲ್ಲ. ಈ ವಿಧವಾಗಿ ಸೈನಿಕರು ತಾವು ಮಾತನಾಡಿದರೂ, ಶತ್ರು ಸೈನಿಕರಿಗೆ ತಿಳಿಯದಂತೆ, ತಮ್ಮವರಿಗೆ ಮಾತ್ರವೇ ತಿಳಿಯುವಂತೆ ಕೋಡ್ ಭಾಷೆಯನ್ನು ಬಳಸುತ್ತಾರೆ. ಇಂಗ್ಲಿಷ್ ಭಾಷೆಯಲ್ಲಿ ಕೋಡ್ ಎಂದರೇ ದೊಡ್ಡ ಅರ್ಥವನ್ನು ಕೊಡುವ ಚಿಕ್ಕ ಪದ ಎಂದು ಹೇಳಬಹುದು. ರಹಸ್ಯಕೋಡ್ ಭಾಷೆ, ಕೆಲವು ಮುಖ್ಯವಾದ ವಿಷಯಗಳಲ್ಲಿ ಬಳಸುತ್ತಿರುತ್ತಾರೆ. ಒಂದೊಂದು ಗುರುತು (ಕೋಡ್)

ಒಂದೊಂದು ಭಾವವನ್ನು ತಿಳಿಸುವುದಾಗಿರುತ್ತದೆ. ಗುರುತು ಎಂದರೇ ಕುರಿತು ಹೇಳುವುದೆಂದು ಅರ್ಥ. ಯಾವುದನ್ನು ಕುರಿತು ಹೇಳುವುದು ಎಂದು ಪ್ರಶ್ನೆಬರದಂತೆ, ಯಾವುದನ್ನು ಕುರಿತು ಗುರುತು ಇಟ್ಟಿದ್ದರೇ ಅದನ್ನು ಕುರಿತೇ ಹೇಳುವುದೆಂದು ತಿಳಿಯಬೇಕು. ಉದಾಹರಣೆಗೆ ಸಂಖ್ಯೆಗಳಲ್ಲಿ ಮೊದಲೇ ನಿರ್ಣಯಿಸಿಕೊಂಡು ಗುರುತಾಗಿಟ್ಟುಕೊಂಡ ಸಂಖ್ಯೆ ಏನಾದರೆ ಇದೆಯೋ, ಆ ಸಂಖ್ಯೆ ಅದನ್ನು ಕುರಿತೇ ವಿವರಿಸುತ್ತದೆ. ದೇವರಿಗೆ ಗುರುತಾಗಿ "9" ಸಂಖ್ಯೆಯನ್ನು, ಆತ್ಮಗೆ ಗುರುತಾಗಿ "6" ಸಂಖ್ಯೆಯನ್ನು ಜೀವಿಗೆ ಗುರುತಾಗಿ '3' ಸಂಖ್ಯೆಯನ್ನು ಶಾಸ್ತ್ರೀಯವಾಗಿ ಇಟ್ಟುಕೊಂಡಾಗ, ಯಾವಾಗ '9' ಸಂಖ್ಯೆಯನ್ನು ಹೇಳಿದರೂ ಅದು ದೇವರನ್ನು ಕುರಿತು ತಿಳಿಸುವುದಾಗಿ ಅರ್ಥವಾಗುತ್ತದೆ. ಆಗ ದೇವರಕೋಡ್ "9" ಆಗಿ ಎಂದಿಗೂ ಬದಲಾಗದೆ ಇರುತ್ತದೆ. ದೇವರು ಸೃಷ್ಠಿಯನ್ನು ತಯಾರು ಮಾಡಿದ ನಂತರ, ಜೀವಾತ್ಮ, ಆತ್ಮ, ಪರಮಾತ್ಮಯೆಂದು ಮೂರು ಭಾಗಗಳಾಗಿ ಪ್ರತಿ ಶರೀರದಲ್ಲಿ ಇದ್ದಾನೆ. ಆದ್ದರಿಂದ ಸೃಷ್ಠಿಕರ್ತ ಕೋಡ್ 963 ಎಂದು ಹೇಳುವುದಾಗಿದೆ. ಪರಮಾತ್ಮಗೆ "9" ಗುರುತನ್ನು, ಆತ್ಮಗೆ "6" ಗುರುತನ್ನು, ಜೀವಾತ್ಮಗೆ "3" ಗುರುತನ್ನು ತೆಗೆದುಕೊಳ್ಳುವುದಕ್ಕೆ ಆಧಾರ ಭಗವದ್ಗೀತೆಯೆಂದು ಹೇಳುತ್ತಿದ್ದೇವೆ.

ಈ ವಿಧವಾಗಿ ಪೂರ್ವದಲ್ಲಿ, ಹಿರಿಯರು ಆಧ್ಯಾತ್ಮಿಕವಿದ್ಯೆ ಎಂದಿಗೂ ಇರುವಂತೆ, ಎಂದಿಗೂ ಬದಲಾಗದಂತೆ, ಎಲ್ಲರಿಗೂ ತಿಳಿಯುವಂತೆ ಮಾಡುವುದಕ್ಕೆ ಕೆಲವು ವಿಧಗಳ ಗುರುತುಗಳಿಗೆ ಎಷ್ಟೋ ಭಾವವನ್ನು ಅಳವಡಿಸಿ, ನಾವು ಮಾತನಾಡಿಕೊಳ್ಳುವ ಭಾಷೆಯಲ್ಲಿ ಬೆರೆಸುವುದು ನಡೆದಿದೆ. ಭಾರತದೇಶದಲ್ಲಿನ ಉಳಿದ ಭಾಷೆಗಳಲ್ಲಿ ಆಧ್ಯಾತ್ಮಿಕ ವಿದ್ಯೆಯಲ್ಲಿ ಗುರುತು (ಕೋಡ್) ಗಳು ಇವೆಯೋ ಇಲ್ಲವೋ ನನಗೆ ತಿಳದಿಲ್ಲ. ತೆಲುಗುಭಾಷೆಯಲ್ಲಿ ಮಾತ್ರ ದೈವಜ್ಞಾನವನ್ನು ಒಳಗೊಂಡ ಗುರುತುಗಳು ಎಷ್ಟೋ ಇವೆಯೆಂದು ಹೇಳಬಹುದು. ಜ್ಞಾನವನ್ನು ತಿಳಿಸುವ ಗುರುತುಗಳನ್ನು, ಅನೇಕ ಸಂದರ್ಭಗಳಲ್ಲಿ ಮನುಷ್ಯರು ಮಾತನಾಡುವಂತೆ, ಅಂದಿನ ಹಿರಿಯರು ಮನುಷ್ಯರಿಗೆ ಅಭ್ಯಾಸ ಮಾಡಿದ್ದಾರೆ. ಪ್ರಪಂಚ ವಿಷಯಗಳಲ್ಲಿ ಮುಳಿಗಿದವರು ಕೂಡಾ ತಾವು ಮಾತನಾಡುವಾಗ, ಸಂದರ್ಭವನ್ನನುಸರಿಸಿ, ಅಲ್ಲಿನ ಸಮಸ್ಯೆಗೆ ಹತ್ತಿರವಾಗಿರುವ ಮಾತನ್ನು

ಹೇಳುವಂತೆ, ಹಿರಿಯರು ಅಭ್ಯಾಸ ಮಾಡಿದಾಗ, ಬಹಳಕಾಲ ಮನುಷ್ಯರ ಮಾತುಗಳಲ್ಲಿ ಆಗಾಗ ಅನ್ನುತ್ತಾ ಬಂದಿದ್ದಾರೆ. ಪ್ರಪಂಚ ವಿಷಯಕ್ಕೆ ಸಮಾನವಾದ ಮಾತನ್ನು ಬಳಸಿದಾಗ ಅದನ್ನು ಸಮತ (ಗಾದೆ) ಎಂದು ಕರೆಯುತ್ತಿದ್ದರು, ತೆಲುಗು ಭಾಷೆಯಲ್ಲಿರುವ ಒಂದು ಗಾದೆಯಲ್ಲಿ ಎಷ್ಟೋ ಅರ್ಥ ಒಳಗೊಂಡಿದೆ. ಆದ್ದರಿಂದ ಗಾದೆಯನ್ನು ರಹಸ್ಯ ಪದ ಎಂದೂ ಸೀಕ್ರೇಟ್‌ಕೋಡ್ ಎಂದು ಹೇಳಬಹುದು. ಒಂದು ಮೂಟೆ ಇರುವಾಗ, ಅದನ್ನು ಬಿಚ್ಚಿದರೆ ಅದರಲ್ಲಿ ಎಷ್ಟೋ ಸಾಮಗ್ರಿ ಇರುವಂತೆ, ಗಾದೆ ಮೂಟೆಯಂತೆ ಇದೆ. ಅದರಲ್ಲಿ ಎಷ್ಟೋ ವಿವರ ಒಳಗೊಂಡಿದೆ. ಬ್ಯಾಂಕುನಿಂದ ತಂದಿರುವ ಮೂಟೆಯನ್ನು ಬಿಚ್ಚಿದರೇ ಹಣ ಸಿಗುತ್ತದೆ. ಸಂತೆಯಿಂದ ತಂದಿರುವ ಮೂಟೆಯನ್ನು ಬಿಚ್ಚಿದರೇ ತರಕಾರಿ ದೊರೆಯುತ್ತದೆ. ಹೀಗೆ ಅನೇಕ ಸಂದರ್ಭಗಳಲ್ಲಿ ಬಳಸುವ ಗಾದೆಗಳಲ್ಲಿ ಆ ಸಂದರ್ಭಕ್ಕೆ ಸಂಬಂಧಿಸಿದ ಜ್ಞಾನವಿರುತ್ತದೆ. ಗಾದೆ ಎಂದರೇ ಒಂದು ದೊಡ್ಡ ವಿವರವನ್ನು ಬಚ್ಚಿಟ್ಟಿರುವ ಚಿಕ್ಕ ಗುರುತು ಎಂದು ತಿಳಿದಿದೆ ಅಲ್ಲವೆ! ಅಂತಹ ಗಾದೆಗಳು ತೆಲುಗು ಭಾಷೆಯಲ್ಲಿ ಎಷ್ಟೋ ಇದ್ದರೂ, ಪ್ರಸ್ತುತ ಕಾಲದಲ್ಲಿ ಅವುಗಳನ್ನು ಬಳಸುವವರು ಯಾರೂ ಇಲ್ಲದೇ ಹೋಗುತ್ತಿದ್ದಾರೆ. ಪೂರ್ವದಲ್ಲಿ ಪ್ರತಿ ಮನುಷ್ಯ ಗಾದೆಯನ್ನು ಹೇಳದೆ ಮಾತನಾಡುವವರಲ್ಲ. ಈ ದಿನ ಗಾದೆಯನ್ನು ಹೇಳುವವರು ಬರವಾಗಿ ಹೋಗಿದ್ದಾರೆ. ಎಲ್ಲಿಯಾದರೂ ಕುಗ್ರಾಮಗಳಲ್ಲಿ ಯಾರಾದರೂ ಹಳೆಕಾಲದ ಮುದುಕರು ಗಾದೆಗಳನ್ನು ಹೇಳಿ ಮಾತನಾಡುವುದು ಉಳಿದಿರಬಹುದು.

ಒಂದು ಚಿಕ್ಕ ಪದದಲ್ಲಿ ಎಷ್ಟೋ ಬೆಲೆಯನ್ನು ಬಚ್ಚಿಟ್ಟಿರುವ ಗಾದೆಯನ್ನು ತೆಲುಗು ಭಾಷೆಯಲ್ಲಿ ಕಳೆದುಕೊಳ್ಳುವುದು ನಮ್ಮ ದುರದೃಷ್ಟ. ತೆಲುಗು ಭಾಷೆ ಎಷ್ಟೋ ಶ್ರೇಷ್ಠವಾದುದೆಂದು, ತೆಲುಗು ಭಾಷೆ ದೇಶಭಾಷೆಗಳಲ್ಲಿಯೇ ಅಲ್ಲದೇ ದೇಹಿ ಭಾಷೆಯಲ್ಲಿ ಕೂಡಾ ಶ್ರೇಷ್ಟವಾದುದೆಂದು, ತೆಲುಗು ಭಾಷೆ ದೈವಜ್ಞಾನಕ್ಕೆ ಎಷ್ಟೋ ಹತ್ತಿರವಾಗಿರುವ ಭಾಷೆಯೆಂದು ನಾವು ಬಹಳಸಲ ಹೇಳಿದ್ದೇವೆ. ತೆಲುಗು ಭಾಷೆಯಲ್ಲಿರುವ ಗಾದೆಗಳು ಎಷ್ಟೋ ಶ್ರೇಷ್ಟವಾದವೆಂದು ತಿಳಿಸುವುದಕ್ಕೆ ಈಗ ಈ ಗ್ರಂಥವನ್ನು ಬರೆಯುತ್ತಿದ್ದೇವೆ. ತೆಲುಗು ಭಾಷೆಯಲ್ಲಿ ಕೆಲವು ನೂರಾರೂ ಗಾದೆಗಳಿದ್ದರೂ, ಅವುಗಳಲ್ಲಿ ಕೆಲವು ಪ್ರದೇಶಗಳಲ್ಲಿ ಕೆಲವರು ಕೆಲವನ್ನು

ಬಳಸುತ್ತಿದ್ದಾರೆ. ನಾನು ಕೂಡಾ ಈ ಕಾಲದ ಮನುಷ್ಯನೇ ಆದ್ದರಿಂದ ಗಾದೆಗಳೆಲ್ಲವನ್ನು ಕುರಿತು ನನಗು ಕೂಡಾ ಗೊತ್ತಿಲ್ಲ. ಆದರೂ ನನಗೆ ತಿಳಿದಮಟ್ಟಿಗೆ ವಿವರವಾಗಿ ಹೇಳಬೇಕೆಂದುಕೊಂಡಿದ್ದೇನೆ. ಈಗ ನಾವು ಹೇಳುವ ಗಾದೆಗಳು ದೈವಜ್ಞಾನ ಸಂಬಂಧವಾದವುಗಳಾದರೂ ಪ್ರಪಂಚದಲ್ಲಿ ಕೆಲವು ಸಂದರ್ಭಗಳಲ್ಲಿ ಬಳಸಿಕೊಳ್ಳಬಹುದು. ಕೆಲವು ಗಾದೆಗಳು ಕಾಲಗಮನದಲ್ಲಿ ಬದಲಾಗಿಹೋಗಿ ಕಾಣಿಸುತ್ತಿವೆ. ಉದಾಹರಣೆಗೆ "ಕೆಲಸವಿಲ್ಲದ ಕ್ಷೌರಿಕ ಕರೆದು ತಲೆ ಬೋಳಿಸಿದಂತೆ" ಎನ್ನುವ ಗಾದೆಯನ್ನು ಕೆಲವರು "ಕೆಲಸವಿಲ್ಲದ ಕ್ಷೌರಿಕ ಬೆಕ್ಕಿನ ತಲೆ ಬೋಳಿಸಿದನಂತೆ" ಎಂದು ಹೇಳುವುದು ಕೇಳಿದ್ದೇವೆ. ಈ ಗಾದೆ ಕಾಲಕ್ರಮದಲ್ಲಿ "ಕರೆದು" ಹೋಗಿ "ಬೆಕ್ಕು" ಆಗಿದೆಯೆಂದು ತಿಳಿಯುತ್ತಿದೆ. ಅಂತಹ ಗಾದೆಗಳನ್ನು ಕೂಡಾ ಸರಿತಿದ್ದುಕೊಂಡು ಹೇಳುವುದು ನಮ್ಮ ಕೆಲಸವಾಗಿ ಇಟ್ಟುಕೊಂಡಿದ್ದೇವೆ.

## 1. ಉದ್ಯೋಗಂ ಪುರುಷ ಲಕ್ಷಣಂ

ಈಗ ಪ್ರಪಂಚ ಸಂಬಂಧ ವಿಷಯಕ್ಕೆ ಸಮಾನವಾಗಿರುವ ಒಂದು ಗಾದೆಯನ್ನು ಹೇಳಿಕೊಳ್ಳೋಣ. ಗಾದೆಗಿಂತ ಮೊದಲು ಪ್ರಪಂಚ ವಿಷಯ ಏನೊ ಮೊದಲು ತಿಳಿದುಕೊಂಡು, ಅದಕ್ಕೆ ಸರಿಹೋಗುವ ಗಾದೆಯನ್ನು ತೆಗೆದುಕೊಳ್ಳೋಣ. ಒಂದು ಊರಿನಲ್ಲಿ ಒಬ್ಬನು ಚೆನ್ನಾಗಿ ಓದಿಕೊಂಡು ಯಂ.ಎ.ಪದವಿಯನ್ನು (ಯಂ.ಎ. ಡಿಗ್ರಿಯನ್ನು) ಹೊಂದಿದ್ದಾನೆ. ಹಾಗೆ ಓದಿ ಅವನು ಯಾವ ಉದ್ಯೋಗಕ್ಕಾಗಿ ಪ್ರಯತ್ನಿಸಲಿಲ್ಲ. ನಂತರ ಕೆಲವರು ಹೇಳಿದಾಗ, ಕೆಲವುಗಳಿಗೆ ಪ್ರಯತ್ನಿಸಿದಾಗ ಆತನಿಗೆ ಉದ್ಯೋಗ ಬರಲಿಲ್ಲ. ಆಗ ಅವನ ವಿಷಯವೆಲ್ಲ ಪ್ರಪಂವ ವಿಷಯವೇ ಹೊರತು, ದೈವಜ್ಞಾನಕ್ಕೆ ಸಂಬಂಧಿಸಿದ ವಿಷಯವೇನು ಅಲ್ಲವೆಂದು ನಮಗು ಕೂಡಾ ತಿಳಿದಿದೆ. ಆದರೂ ಅವನ ವಿಷಯದಲ್ಲಿ ಮಾತನಾಡುವ ಕೆಲವರು, ಆತನಿಗೆ ಬುದ್ಧಿ ಹೇಳಿದಂತೆ "ಉದ್ಯೊಗಮ್ ಪುರುಷಲಕ್ಷಣಮ್" ಎಂದು ಹೇಳುತ್ತಾ "ಉದ್ಯೋಗವನ್ನು ಹುಡುಕಿ ನೋಡಿಕೊ, ಉದ್ಯೋಗ ಮಾಡುವುದೇ ಪುರುಷಲಕ್ಷಣವೆಂದು ಹಿರಿಯರು ಹೇಳಿದ್ದಾರೆ ಅಲ್ಲವೆ! ನೀನು ಗಂಡಸಾಗಿ ಮನೆಯತ್ತಿರ ಉದ್ಯೋಗ ಮಾಡದಂತೆ ಇರಬಾರದು. ಹಾಗೆ ಉದ್ಯೋಗ ಇಲ್ಲದೇ ಇರುವುದು ಪುರುಷಲಕ್ಷಣ

ಅಲ್ಲ” ಎಂದು ಹೇಳಿದ್ದಾರೆ. ಪುರುಷನಾದವನು ಉದ್ಯೋಗ ಮಾಡುವುದೇ ಆತನ ಲಕ್ಷಣವೆಂದು ಹೇಳಿದ ಮಾತು, ಅಂದಿನ ಪ್ರಪಂಚ ಸ್ಥಿತಿಯನ್ನನುಸರಿಸಿ ಆತನಿಗೆ ಸರಿಹೋದರೂ, ಆ ಮಾತಿನಲ್ಲಿ ಎಷ್ಟೋ ದೈವಜ್ಞಾನ ಸಂದೇಶ ಒಳಗೊಂಡಿದೆ. ಪ್ರಪಂಚ ಪರಿಸ್ಥಿತಿಯನ್ನನುಸರಿಸಿ ಹಾಗೆ ಹೇಳಿದ ಗಾದೆ ದೈವಜ್ಞಾನದಿಂದ ಕೂಡಿದೆಯೆಂದು ಯಾರಿಗೂ ತಿಳಿದಿಲ್ಲ. ಆಗ ತಿಳಿಯದೆ ಹೋದರೂ ಆ ಗಾದೆ (ಸಮತ) ಪ್ರಜೆಗಳಿಗೆ ಅಭ್ಯಾಸ ಆಗಬೇಕೆಂದು, ಆ ಸಂದರ್ಭದಲ್ಲಿ ಅದನ್ನು ಹೇಳಿದ್ದಾರೆ. ಸಂದರ್ಭವನ್ನನುಸರಿಸಿ ಹೇಳುವ ಗಾದೆಯನ್ನು ಕುರಿತು ಯಾರೋ ಒಬ್ಬರು ಆಲೋಚಿಸುತ್ತಾರೆಂದು, ಅವರ ಆಲೋಚನೆಗೆ ಸಿಗದಿರುವಾಗ ಇತರರನ್ನು ಕೇಳಿ ಅವರ ಯೋಚನೆಗೆ ಬಂದ ವಿಷಯವನ್ನು ತಿಳಿದುಕೊಳ್ಳುತ್ತಾರೆಂದು ದೇವರ ಜ್ಞಾನ ತಿಳಿದವರು ಹಾಗೆ ಗಾದೆಯನ್ನು ತಯಾರು ಮಾಡಿದ್ದಾರೆ.

ಗಾದೆಯನ್ನು ತಯಾರು ಮಾಡಿದವರು ಪುರುಷ ಲಕ್ಷಣಮ್ ಎನ್ನುವ ಪದವನ್ನು ಬಳಸಿದ್ದಾರೆ. ಪುರುಷಲಕ್ಷಣಕ್ಕೆ ವಿರುದ್ಧ ಪದ ಸ್ತ್ರೀ ಲಕ್ಷಣ ಇದೆ. ಉದ್ಯೋಗ ಮಾಡುವುದು ಪುರುಷಲಕ್ಷಣ ಆದಾಗ, ಉದ್ಯೋಗ ಮಾಡದೇ ಇರುವುದು ಸ್ತ್ರೀ ಲಕ್ಷಣವಾಗುತ್ತದೆ ಅಲ್ಲವೆ! ಪ್ರಸ್ತುತ ಆತನು ಉದ್ಯೋಗ ಮಾಡಲಿಲ್ಲ, ಆದ್ದರಿಂದ ಆತನಿಗೆ ಸ್ತ್ರೀ ಲಕ್ಷಣಗಳಿವೆಯೆಂದು, ಉದ್ಯೋಗ ಮಾಡಿದಾಗ ಪುರುಷ ಲಕ್ಷಣಗಳು ಬರುತ್ತವೆಯೆಂದು, ಆ ಗಾದೆಯನ್ನನುಸರಿಸಿ ನಮಗೆ ಅರ್ಥವಾಗುತ್ತಿದೆ. ಉದ್ಯೋಗ ಇಲ್ಲದಿರುವಾಗ ಇರುವ ಸ್ತ್ರೀ ಲಕ್ಷಣ ಏನು? ಉದ್ಯೋಗ ಇರುವಾಗ ಇರುವ ಪುರುಷ ಲಕ್ಷಣವೇನು? ಎಂದು ಪ್ರಶ್ನಿಸಿಕೊಂಡು ನೋಡಿದರೆ ನಮ್ಮ ಯೋಚನೆಗೆ ಹೀಗೆ ತಿಳಿಯುತ್ತಿದೆ. ಈ ಗಾದೆಯನ್ನು ಪ್ರಪಂಚ ವಿಷಯಕ್ಕೆ ಸಂಬಂಧಿಸಿದ ಸಂದರ್ಭದಲ್ಲಿ ಬಳಸಿದರೂ, ಅದರಲ್ಲಿ ದೈವಿಕವಾದ ಜ್ಞಾನ ಸಂದೇಶ ಇರುತ್ತದೆಂದು ಮೊದಲೇ ಹೇಳಿಕೊಂಡಿದ್ದೇವೆ ಅಲ್ಲವೆ! ಅದರ ಪ್ರಕಾರ ಪ್ರಪಂಚದಲ್ಲಿ ಸ್ತ್ರೀ ಲಕ್ಷಣ, ಪುರುಷ ಲಕ್ಷಣಗಳೆಂದು ಎರಡು ಲಕ್ಷಣಗಳು ಇವೆ. ಸ್ತ್ರೀ ಲಕ್ಷಣವೆಂದರೇ ಪ್ರಕೃತಿ ಲಕ್ಷಣವೆಂದು, ಪುರುಷಲಕ್ಷಣವೆಂದರೆ ಪರಮಾತ್ಮ ಲಕ್ಷ್ಮಣವೆಂದು ಹೇಳಬಹುದು. ಭಗವದ್ಗೀತೆಯಲ್ಲಿ ಗುಣತ್ರಯ ವಿಭಾಗಯೋಗದಲ್ಲಿ ಮೂರು, ನಾಲ್ಕು ಶ್ಲೋಕಗಳಲ್ಲಿಯೇ ಪ್ರಕೃತಿ ಸ್ತ್ರೀಯೆಂದು,

ಪರಮಾತ್ಮನಾದ ತಾನು ಪುರುಷನೆಂದು, ನಮ್ಮ ಇಬ್ಬರಿಗೆ ಉಂಟಾದ ಸಂತಾನವೇ ಸರ್ವಜೀವರಾಶಿಗಳೆಂದು, ದೇವರು ಹೇಳುವುದು ನಡೆದಿದೆ. ಸ್ತ್ರೀ, ಪುರುಷರು ಪ್ರಕೃತಿ, ಪರಮಾತ್ಮರೆಂದು ತಿಳಿದಾಗ, ಉದ್ಯೋಗ ಇಲ್ಲದಿರುವಾಗ ಸ್ತ್ರೀ ಲಕ್ಷಣ (ಪ್ರಕೃತಿ ಲಕ್ಷಣ), ಉದ್ಯೋಗ ಇರುವಾಗ ಪುರುಷ ಲಕ್ಷಣ (ದೈವ ಲಕ್ಷಣ) ಆಗುವುದಕ್ಕಿರುವ ಕಾರಣವನ್ನು ತಿಳಿಯುವುದಕ್ಕೆ ಮೊದಲು ಉದ್ಯೋಗವೆಂದರೇ ಏನೊ, ಅದಕ್ಕು ಪುರುಷನಿಗಿರುವ ಅನುಬಂಧವೇನೊ ತಿಳಿದುಕೊಳ್ಳೋಣ.

ಉದ್ಯೋಗವನ್ನು ಬಿಡಿಸಿ ನೋಡಿದರೆ ಉದ್+ಯೋಗ=ಉದ್ಯೋಗ ಎಂದು ಇದೆ. ಉದ್ ಎಂದರೇ ಮೇಲಿನ ಭಾಗದಲ್ಲಿ ಅಥವಾ ಎಲ್ಲದಕ್ಕಿಂತ ದೊಡ್ಡದು ಎಂದು ಅರ್ಥಬರುತ್ತದೆ. ಎಲ್ಲದಕ್ಕಿಂತ ದೊಡ್ಡದು ಎನ್ನುವುದನ್ನು ಬ್ರಹ್ಮ ಎನ್ನುತ್ತಾರೆ. ಬ್ರಹ್ಮ ಎಲ್ಲದಕ್ಕಿಂತ ದೊಡ್ಡವನು, ಆದ್ದರಿಂದ ಬ್ರಹ್ಮನನ್ನು ದೇವರು ಎನ್ನಬಹುದು. ಈ ಪ್ರಕಾರ ಉದ್ ಎಂದರೇ ದೇವರು ಎಂದು ತಿಳಿಯುತ್ತಿದೆ. ಯೋಗ ಎನ್ನುವ ಪದವೊಂದರ ಅರ್ಥ ಸೇರುವಿಕೆ ಎಂದು ತಿಳಿಯುತ್ತಿದೆ. ದೇವರೊಂದಿಗೆ ಬೆರೆಯುವುದನ್ನು ಉದ್ಯೋಗ ಎನ್ನುತ್ತೇವೆ. ಯಾರಾದರೆ ದೇವರೊಂದಿಗೆ ಕೂಡಿಕೊಂಡಿದ್ದಾನೊ, ಅವನು ಕೂಡಾ ದೇವರೇ ಆಗುತ್ತಾನೆ ಅಲ್ಲವೆ! ದೇವರಲ್ಲಿ ಬೇರುತುಹೋದವನು ಪ್ರತ್ಯೇಕವಾಗಿ ಇದ್ದಾನೆಂದು ಹೇಳಲಾರೆವು ಅಲ್ಲವೆ! ದೇವರಲ್ಲಿ ಸೇರುವವರೆಗು ಪ್ರಕೃತಿ ಲಕ್ಷಣಗಳಿಂದ ಕೂಡಿಕೊಂಡಿರುವ ಜೀವಿಯು, ಪ್ರಕೃತಿ ಲಕ್ಷಣಗಳನ್ನು ಬಿಟ್ಟು ದೇವರಲ್ಲಿ ಬೆರೆತುಹೋಗಿ, ತಾನು ಕೂಡಾ ಪುರುಷನಾಗುತ್ತಿದ್ದಾನೆ. ಜೀವಿಯಲ್ಲಿ ಪ್ರಕೃತಿ, ಪುರುಷನ ಎರಡು ಲಕ್ಷಣಗಳು ಬೆರೆತಿವೆ. ಯಾರಾದರೆ ಯೋಗ ಮಾಡಿ ಕೊನೆಗೆ ಉದ್ಯೋಗವನ್ನು ಹೊಂದುತ್ತಿದ್ದಾನೊ, ಅವನು ಪ್ರಕೃತಿ ಲಕ್ಷಣಗಳನ್ನು ಬಿಟ್ಟು ಪುರುಷ (ದೈವ) ಲಕ್ಷಣಗಳನ್ನು ಪೂರ್ತಿಯಾಗಿ ಹೊಂದುತ್ತಿದ್ದಾನೆ. ಆದ್ದರಿಂದ ಉದ್ಯೋಗ ಪುರುಷ ಲಕ್ಷಣವೆಂದಿದ್ದಾರೆ. ಉದ್ಯೋಗ ಎಂದರೇ ಮೋಕ್ಷವೆಂದು, ಪುರುಷನು ಎಂದರೇ ದೇವರೆಂದು, ಪುರುಷ ಲಕ್ಷಣವೆಂದರೇ ದೇವರಾಗಿ ಬದಲಾಗಿಹೋಗುವುದೆಂದು, ಜೀವಿಯು ತನ್ನಲ್ಲಿನ ಪ್ರಕೃತಿ ತತ್ತ್ವವನ್ನು ಬಿಟ್ಟು ಪೂರ್ತಿ ಪುರುಷನಾಗಿ (ದೇವರಾಗಿ) ಬದಲಾಗಿಹೋಗುವುದೆಂದು ಅರ್ಥ. ಇದೆಲ್ಲವೂ ನೋಡಿದ ನಂತರ, ಉದ್ಯೋಗ ಪುರುಷ ಲಕ್ಷಣವೆನ್ನುವ ಮಾತಿನಲ್ಲಿ

ದೈವಜ್ಞಾನಕ್ಕೆ ಸಂಬಂಧಿಸಿದ ವಿಷಯ ಅಡಗಿದೆಯೆಂದು ತಿಳಿಯುತ್ತಿದೆ. ಈ ಮಾತು ಜ್ಞಾನಕ್ಕೆ ಸಂಬಂಧಿಸಿರುವುದಾದರೂ, ಕೆಲವು ಪ್ರಪಂಚ ಸಂಬಂಧ ವಿಷಯಗಳಿಗೆ ಹತ್ತಿರ ಸಂಬಂಧವಿರುವ ಸಂದರ್ಭಗಳಲ್ಲಿ ಬಳಸುವುದರಿಂದ, ಆ ಮಾತು ಪ್ರಚಾರವಾಗಿಹೋಗಿ ಲೋಕಕ್ಕೆ ತಿಳಿದ ನಂತರ, ಯಾವಾಗಲೋ ಒಂದುಸಲ ಅದರ ವಿವರ ತಿಳಿಯಬಲ್ಲದೆಂದು, ಗಾದೆಯನ್ನು ತಿಳಿಸಿದವರು ಅಂದುಕೊಂಡಿದ್ದಾರೆ. ಅವರ ಉದ್ದೇಶ ಈಗ ನೆರವೇರಿದೆ ಎಂದುಕೊಳ್ಳುತ್ತೇನೆ.

## 2. ಆಲೂ ಇಲ್ಲ, ಸೂಲೂ ಇಲ್ಲ, ಮಗನ ಹೆಸರು ಸೋಮಲಿಂಗ

ಪ್ರಪಂಚ ವಿಷಯಗಳಲ್ಲಿ ಏನಾದರೂ ಮೊದಲೇ ಊಹಿಸಿ ಯಾರಾದರೂ ಹೇಳಿದರೇ, ಅದನ್ನು ಕೇಳಿದವರು ಆತನು ಹೇಳಿರುವುದು ಆಧಾರವಿಲ್ಲದೆ ಹೇಳಿರುವುದೆಂದು, ಅದು ನಿಜವೋ ಅಲ್ಲವೋಯೆಂದು, ಆತನ ಮಾತನ್ನು ನಂಬುವುದಕ್ಕೆ ಸಾಧ್ಯವಿಲ್ಲ ಎನ್ನುವಂತೆ ಗುರುತಾಗಿ ಒಂದುಮಾತನ್ನು ಹೇಳುವುದು ಇದೆ. ಉದಾಹರಣೆಗೆ ಒಬ್ಬ ವ್ಯಕ್ತಿ ಮುಂಬರುವಂತಹ ವರ್ಷ ಮಳೆಗಳು ಚೆನ್ನಾಗಿ ಬಂದು ಶೇಂಗಾ ಬೆಳೆ ಚೆನ್ನಾಗಿ ಬೆಳೆಯುತ್ತದೆಂದು ಹೇಳಿದ್ದಾನೆಂದುಕೊಳ್ಳಿ. ಅದನ್ನು ಕೇಳಿದವನು ಹೀಗೆ ಅಂದಿದ್ದಾನಂತೆ. ವ್ಯವಸಾಯ ಮಾಡಲಿಲ್ಲ, ಮಳೆಯು ಬರಲಿಲ್ಲ, ಮೊದಲೇ ಶೇಂಗಾಬೆಳೆ ಬೆಳೆಯುತ್ತದೆಂದು ಹೇಳುವುದು "ಆಲೂ ಇಲ್ಲ, ಸೂಲೂ ಇಲ್ಲ, ಮಗನ ಹೆಸರು ಸೋಮಲಿಂಗ" ಎನ್ನುವಂತಿದೆ ಎಂದು ಹೇಳಿದ್ದಾನಂತೆ. ಹಾಗೆ ಹೇಳುವುದರಿಂದ ಬೆಳೆ ಬೆಳೆಯುತ್ತದೆಂದು ಮೊದಲೇ ಹೇಳುವುದು ಆಧಾರವಿಲ್ಲದ ವಿಷಯವೆಂದು, ಅದನ್ನು ನಂಬುವುದಕ್ಕೆ ಸಾಧ್ಯವಿಲ್ಲವೆಂದು, ಕೇಳುವವರಿಗೆ ಅರ್ಥವಾಗುತ್ತಿದೆ. "ಆಲೂ ಇಲ್ಲ, ಸೂಲೂ ಇಲ್ಲ, ಮಗನ ಹೆಸರು ಸೋಮಲಿಂಗ" ಎನ್ನುವ ಗಾದೆ, ಆಗಿನವರ ಪ್ರಪಂಚ ಉದ್ದೇಶಕ್ಕೆ ಸರಿಹೋದರೂ, ಅದರಲ್ಲಿ ದೈವಜ್ಞಾನಕ್ಕೆ ಸಂಬಂಧಿಸಿದ ವಿವರ ಒಳಗೊಂಡಿದೆಯೆಂದು ಅರ್ಥವಾಗುತ್ತಿದೆ. ಹೇಳಲ್ಪಟ್ಟ ಗಾದೆ ಆಗ ಅಲ್ಲಿ ಸಂದರ್ಭದಲ್ಲಿನ ವಿಷಯಕ್ಕೆ ಪೂರ್ತಿಯಾಗಿ ಸರಿಹೋಗುವಂತೆ ಇದ್ದರೂ, ಯೋಚಿಸುವವರಿಗೆ ಆ ಗಾದೆ ದೈವಜ್ಞಾನಕ್ಕೆ ಗುರುತಾಗಿ ಕಾಣಿಸುತ್ತಿದೆ.

ಗುರುತು ಎಂದರೇ ಕುರಿತು ಹೇಳುವುದೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಈ ಗುರುತನ್ನು ತಯಾರು ಮಾಡಿದವನು ಯಾವುದಕ್ಕಾಗಿ ಮಾಡಿದ್ದಾನೊ ಅದನ್ನು ಕುರಿತು ಹೇಳಬಲ್ಲದು. ಈ ಗುರುತು ಇಲ್ಲವೆ ಈ ಗಾದೆಯಲ್ಲಿ ಏನಿದೆಯೋ ಈಗ ನಾವು ವಿವರಿಸಿಕೊಳ್ಳೋಣ.

ಆಧ್ಯಾತ್ಮಿಕ ಜ್ಞಾನದ ಪ್ರಕಾರ, ದೇವರು ಭಗವಂತನಾಗಿ ಹೇಳಿದ ಭಗವದ್ಗೀತೆ ಪ್ರಕಾರ ಪ್ರಕೃತಿ ಪರಮಾತ್ಮರೆನ್ನುವವರು ವಿಶ್ವದಲ್ಲಿ ಇದ್ದಾರೆ. ಪ್ರಕೃತಿ ಸ್ತ್ರೀ ತತ್ತ್ವವು ಇರುವುದಾಗಿದ್ದು, ಪರಮಾತ್ಮ ಪರುಷತತ್ತ್ವ ಇರುವವನು. ಪುರುಷನಾದ ದೇವರ ಬೀಜದಿಂದ, ಪ್ರಕೃತಿ ಗರ್ಭದಿಂದ ಸಕಲ ಜಿವರಾಶಿಗಳು ಹುಟ್ಟುತ್ತಿವೆಯೆಂದು, ಆದ್ದರಿಂದ ಸಕಲ ಜೀವಿಗಳಿಗೂ ತಾಯಿ ಪ್ರಕೃತಿಯೆಂದು, ತಂದೆ ಪರಮಾತ್ಮ ಎಂದು ಗೀತೆಯಲ್ಲಿ ಹೇಳುವುದಾಗಿದೆ. ಒಬ್ಬ ಮನುಷ್ಯ ತಾನು ಮೊದಲು ದೈವಜ್ಞಾನವನ್ನು ಸಂಪೂರ್ಣವಾಗಿ ತಿಳಿದುಕೊಂಡ ನಂತರ ಯೋಗಸಾಧನೆ ಮಾಡಿ ಯೋಗಿ ಆಗಬಹುದು. ನಂತರ ಮೋಕ್ಷವನ್ನು ಹೊಂದಬಹುದು. ಮೊದಲು ದೈವಜ್ಞಾನದಲ್ಲಿ ಪ್ರಕೃತಿ ಯಾವುದು ಎಂದು, ಅದು ಎಲ್ಲರಿಗೂ ತಾಯಿ ಹೇಗೆ ಆಗುತ್ತಿದ್ದಾಳೆಂದು, ಹಾಗೆಯೇ ಪರಮಾತ್ಮ ಎಂತಹವನೆಂದು, ಆತನು ಎಲ್ಲರಿಗೂ ತಂದೆ ಹೇಗೆ ಆಗಿದ್ದಾನೆಂದು ಪೂರ್ತಿಯಾಗಿ ಜ್ಞಾನದಿಂದ ತಿಳಿಯಬೇಕು. ಆ ವಿಷಯವನ್ನು ಈ ಗಾದೆಗೆ ಹೋಲಿಸಿದ್ದಾರೆ. ಪ್ರಕೃತಿಯನ್ನು ಆಲೂ (ಹೆಂಡತಿ) ಎಂದು ಹೇಳಿದ್ದಾರೆ. ಪರಮಾತ್ಮ ಬೀಜದಿಂದ ಏರ್ಪಡುವ ಗರ್ಭವನ್ನು ಸೂಲು ಎಂದಿದ್ದಾರೆ. ಯಾರಾದರೂ ಪ್ರಕೃತಿಯನ್ನು ಕುರಿತಾಗಲಿ, ಪರಮಾತ್ಮ ಬೀಜವನ್ನು ಕುರಿತಾಗಲಿ ತಿಳಿಯದಿರುವಾಗ, ಯೋಗಿ ಹೇಗೆ ಆಗುತ್ತಾನೆ.? ಎಂಬ ಅರ್ಥ ಬರುವಂತೆ ಮಗನ ಹೆಸರು ಸೋಮಲಿಂಗನೆನ್ನುವಂತೆ ಎಂದು ಹೇಳಿದ್ದಾರೆ. ಸೋಮನು ಎಂದರೇ ಚಂದ್ರನೆಂದು ಜ್ಞಾನವೆಂದು ಅರ್ಥ. ಸೋಮಲಿಂಗ ಎಂದರೇ ಜ್ಞಾನದಿಂದ ಆಗಿರುವ ಯೋಗಿಯೆಂದು ಅರ್ಥ. ಇದರಿಂದ ಪ್ರಕೃತಿ ಪುರುಷರ ಜ್ಞಾನ ತಿಳಿಯದೇ ಯಾರೂ ಕೂಡಾ ಯೋಗಿ ಆಗಲಾರನು ಎಂದು ತಿಳಿಯುತ್ತಿದೆ. ಮಳೆ, ವ್ಯವಸಾಯ ಎರಡೂ ಇಲ್ಲದಿರುವಾಗ ಬೆಳೆಯನ್ನು ಕುರಿತು ಹೇಳಿದರೇ ಎಷ್ಟು ಅಸತ್ಯವೊ, ಪ್ರಕೃತಿ ಜ್ಞಾನ, ಪರಮಾತ್ಮ ಜ್ಞಾನ ತಿಳಿಯದಿರುವಾಗ ಅವನನ್ನು

ಯೋಗಿ ಎನ್ನುವುದು ಅಷ್ಟೇ ಅಸತ್ಯವಾಗುತ್ತದೆಂದು ತಿಳಿಯುತ್ತಿದೆ. ಹೇಳಿರುವುದು ಪ್ರಪಂಚ ಸಂಬಂಧ ವಿಷಯಕ್ಕೆ ಸಮಾನವಾಗಿರುವ ಹೋಲಿಕೆ ಯಾದರೂ, ಅದರಲ್ಲಿ ಎಷ್ಟೋ ಆತ್ಮಜ್ಞಾನವನ್ನು ಒಳಪಡಿಸಿ, ಈ ಗಾದೆಯನ್ನು ತಯಾರು ಮಾಡಿ ಹೇಳಿದ್ದಾರೆಂದು ಅರ್ಥವಾಗುತ್ತಿದೆ. ದೈವಜ್ಞಾನವನ್ನು ಪ್ರಚಾರ ಮಾಡುವುದನ್ನು ದೈವ ಸೇವೆಯಾಗಿ ತಿಳಿದ ಜ್ಞಾನಿಗಳು ಈ ವಿಧವಾಗಿ ಅವರಿಗೆ ತಿಳಿದ ಜ್ಞಾನವನ್ನು ಸಂದರ್ಭ ನೋಡಿ, ಗಾದೆಗಳ ರೂಪದಲ್ಲಿ ಹೇಳಿ, ದೇವರ ಜ್ಞಾನವು ಪ್ರಜೆಗಳೊಳಗೆ ಹೋಗುವಂತೆ ಮಾಡಿದ್ದಾರೆ.

## 3. ಪೌರುಷಕ್ಕೆ ಮಂಗಳ ಕತ್ತಿಗಳು ನುಂಗಿದಂತೆ.

ಕೆಲವು ಜನ ಜಿದ್ದಿಗೆ ಹೋಗಿ ಅನವಶ್ಯಕವಾಗಿ ತಗಾದೆ ಬೀಳುತ್ತಿರುತ್ತಾರೆ. ತಮಗಿಂತ ಎಲ್ಲಾ ವಿಧಗಳು ಬಲವಾದವರೊಂದಿಗೆ ಪೋಟಿಬಿದ್ದು ಕೊನೆಗೆ ತಾವೇ ನಷ್ಟಹೋಗುತ್ತಿರುತ್ತಾರೆ. ಇಂತಹ ಸಂಘಟನೆಗಳು ಅಲ್ಲಲ್ಲಿ ನಡೆ ಯುತ್ತಿರುತ್ತವೆ. ಅಂತಹ ಸಂದರ್ಭಗಳಲ್ಲಿ ಆ ಕೆಲಸಕ್ಕೆ ಸರಿಹೋಗುವ ಗಾದೆಯನ್ನು ದೈವಜ್ಞಾನ ತಿಳಿದ ಹಿರಿಯರು ಹೇಳುವುದು ನಡೆದಿದೆ. ಆ ಗಾದೆ ಹೀಗಿದೆ. “ಪೌರುಷಕ್ಕೆ ಮಂಗಳ (ಕ್ಷೌರಿಕ) ಕತ್ತಿಗಳು ನುಂಗಿದಂತೆ” ಎನ್ನುವ ಈ ಮಾತಿನಲ್ಲಿ ಅನವಶ್ಯವಾದ ಪೋಟಿಗೆ ಹೋಗಿ ತಾನೆ ನಷ್ಟಹೋದಂತೆ ಎಂದು ತಿಳಿದರೂ, ಅದರಲ್ಲಿ ಸೂಕ್ಷ್ಮವಾದ ಜ್ಞಾನವಿದೆ. ಮೇಲ್ನೋಟಕ್ಕೆ ಕಾಣಿಸದಂತೆ ಇರುವ ಜ್ಞಾನವನ್ನು ಕಾಣಿಸುವ ಪ್ರಪಂಚ ವಿಷಯಗಳಲ್ಲಿ ಉಪಯೋಗಿಸುವುದರಿಂದ ಈ ಮಾತು ಆ ಸಂದರ್ಭದಲ್ಲಿ ಸರಿಹೋದರೂ, ಈ ಗಾದೆಯಲ್ಲಿ ಇರುವ ಪದಗಳನ್ನು ಬಿಡಿಸಿ ನೋಡಿಕೊಂಡರೆ. ಕಾಣಿಸದ ಸೂಕ್ಷ್ಮಜ್ಞಾನ ಅರ್ಥವಾಗುತ್ತದೆ. ಪೌರುಷ ಎನ್ನುವ ಮಾತು ಬಾಹ್ಯ ಪ್ರಪಂಚದಲ್ಲಿ ವಿನಿಯೋಗಿಸುತ್ತಿದ್ದರೂ, ಅದು ಆಧ್ಯಾತ್ಮಿಕದಲ್ಲಿ ಪ್ರತ್ಯೇಕವಾದ ಅರ್ಥ ಇರುವುದಾಗಿದೆ. ಹಾಗೆಯೇ ಮಂಗಳ ಕತ್ತಿಗಳು ಎನ್ನುವ ಪದ ಹೊರಗಿನ ಪ್ರಪಂಚದಲ್ಲಿ ಎಲ್ಲರಿಗೂ ತಿಳಿದ ಪದವಾದರೂ, ಅದು ಆಧ್ಯಾತ್ಮಿಕ ವಿದ್ಯೆಯಲ್ಲಿ ಮತ್ತೊಂದು ಬೆಲೆಯುಳ್ಳ ಅರ್ಥವನ್ನು ಕೊಡಬಲ್ಲದು. ಈ ವಿಧವಾಗಿ ಆಧ್ಯಾತ್ಮಿಕ ವಿದ್ಯೆ (ಬ್ರಹ್ಮ ವಿದ್ಯೆ) ಪ್ರಕಾರ ಈ ಗಾದೆಯನ್ನು ವಿವರಿಸಿಕೊಂಡು ನೋಡಿದರೆ, ಹೀಗೆ ಅರ್ಥವಾಗುತ್ತಿದೆ.

ಪೌರುಷ ಎಂದರೇ ಪುರುಷತ್ವವೆಂದು ಅರ್ಥ. ಪುರುಷತ್ವ ಎನ್ನುವ ಮಾತು ಸ್ಥೂಲವಾಗಿ ಪುರುಷರ (ಗಂಡಸರ) ಬಗ್ಗೆ ಬಳಸಿದರೂ, ಸೂಕ್ಷ್ಮವಾಗಿರುವ ಭಾವನೆಯನ್ನು ನೋಡಿದರೆ ಪರುಷನು ಎಂದರೇ ದೇವರು ಎಂದೂ, ಪರುಷತ್ವವೆಂದರೇ ದೈವತ್ವವನ್ನು ತಿಳಿದುಕೊಳ್ಳುವುದೆಂದು ಅರ್ಥ. ನಂತರ ಮಂಗಳ ಕತ್ತಿಗಳು ಎನ್ನುವ ಪದದಲ್ಲಿ ಕತ್ತಿಗಳು ಎಂದರೇ ಖಂಡಿಸುವವು, ಕತ್ತರಿಸುವವೆಂದು ಅರ್ಥ. ಮಂಗಳ ಎಂದರೇ ಶುಭಕರವಾದ ಎಂದು ಅರ್ಥ. ಎಲ್ಲಾ ವಿಧಗಳ ದೇವರಿಗಿಂತ ಶುಭಕರವಾದುದು ಪ್ರಪಂಚದಲ್ಲಿ ಯಾವುದು ಇಲ್ಲ. ಆದ್ದರಿಂದ ಶುಭಕರ ಎಂದರೇ ದೇವರು ಎಂದು ಅರ್ಥ. ಮಂಗಳ ಎನ್ನುವ ಮಾತು ದೇವರನ್ನು ತಿಳಿಸುವ ನಿಮಿತ್ತವಾಗಲಿ, ಮೋಕ್ಷವನ್ನು ತಿಳಿಸುವ ನಿಮಿತ್ತವಾಗಲಿ ಆಧ್ಯಾತ್ಮಿಕ ವಿದ್ಯೆಯಲ್ಲಿ ಬಳಸುತ್ತಿದ್ದೇವೆ. ಮಂಗಳ ಕತ್ತಿಗಳು ಎಂದರೇ ದೈವಶಕ್ತಿ ಇರುವ ಜ್ಞಾನವೆಂದು ಅರ್ಥ. ದೈವಶಕ್ತಿಯನ್ನು ಜ್ಞಾನಾಗ್ನಿ ಎಂದು ಕೂಡಾ ಹೇಳುತ್ತಿರುತ್ತಾರೆ. ಜ್ಞಾನಾಗ್ನಿಯಿಂದ ಸಕಲವಾದ ಕರ್ಮಗಳು ಸುಟ್ಟುಹೋಗುತ್ತವೆ. ದೇವರ ಜ್ಞಾನದಿಂದ ಕರ್ಮ ನಶಿಸಿ ಹೋಗುತ್ತಿದೆ. ಆದ್ದರಿಂದ ಕರ್ಮಗಳನ್ನು ಸುಡುವ ದೈವಜ್ಞಾನವನ್ನು ಮಂಗಳ ಕತ್ತಿಗಳು ಎನ್ನುವುದು ನಡೆಯುತ್ತಿದೆ. ಮೇಲ್ನೋಟಕ್ಕೆ ಕಾಣಿಸುವ ಪ್ರಪಂಚ ವಿಧಾನದಲ್ಲಿನ ಮಾತಾಗಿ ಹೇಳಿದ ಗಾದೆಯಿಂದ, ವಿಶೇಷವಾದ ವಿವರವು ತಿಳಿಯುತ್ತಿದೆ. ದೇವರನ್ನು ತಿಳಿದುಕೊಳ್ಳುವುದಕ್ಕೆ ಇಲ್ಲವೇ ದೇವರಲ್ಲಿ ಐಕ್ಯವಾಗುವುದಕ್ಕೆ ಕರ್ಮವನ್ನು ಖಂಡಿಸಿ ನಾಶಮಾಡುವ ದೈವಜ್ಞಾನವನ್ನು ತಿಳಿಯಬೇಕೆಂದು ಅರ್ಥವಾಗುತ್ತಿದೆ. ಪೌರುಷಕ್ಕೆ ಎಂದರೇ ದೇವರನ್ನು ತಿಳಿಯುವುದಕ್ಕೆ, ಮಂಗಳ ಕತ್ತಿಗಳು ಎಂದರೇ ಕರ್ಮವನ್ನು ಖಂಡಿಸುವ ದೈವಜ್ಞಾನವನ್ನು, ನುಂಗಬೇಕು ಎಂದರೇ ಶರೀರದಲ್ಲಿನ ತಲೆಗೆ ಏರಿಸಿಕೊಳ್ಳಬೇಕು. ದೇವರ ಜ್ಞಾನವನ್ನು ತಿಳಿಯದವನು, ಜನ್ಮಕ್ಕೆ ಕಾರಣವಾದ ಕರ್ಮವನ್ನು ಇಲ್ಲದಂತೆ ಮಾಡಿಕೊಳ್ಳಲಾರನು, ದೇವರನ್ನು ತಿಳಿಯಲಾರನು. ಕರ್ಮ ಇರುವವನು ದೇವರಲ್ಲಿ ಐಕ್ಯವಾಗುವುದಿಲ್ಲ. ದೇವರಲ್ಲಿ ಐಕ್ಯವಾಗದಿದ್ದರೆ ದೇವರು ಹೇಗಿರುವುದು ಯಾರಿಗೂ ತಿಳಿಯುವುದಿಲ್ಲ. ಈ ಜ್ಞಾನ ವಿಷಯವನ್ನು ತಿಳಿಸುವ ನಿಮಿತ್ತ "ಪೌರುಷಕ್ಕೆ ಮಂಗಳ ಕತ್ತಿಗಳು ನುಂಗಿದಂತೆ" ಎನ್ನುವ ಗಾದೆಯನ್ನು ಹೇಳಿದ್ದಾರೆ.

# 4. ಸೂಳೆ ಮಗನಿಗೆ ತಂದೆ ಯಾರು

ಹೊರಗಿನ ಪ್ರಪಂಚದಲ್ಲಿ ವ್ಯಭಿಚಾರಿಣಿಯನ್ನು ಸೂಳೆ ಎನ್ನುವುದು ಕೂಡಾ ನಡೆಯುತ್ತಿದೆ. ಸೂಳೆ ಎನ್ನುವ ಪದ ಮೊರಟಾಗಿ ಕಾಣಿಸಿದರೂ ಪೂರ್ವದಲ್ಲಿ ಎಲ್ಲರೂ ಅ ಪದವನ್ನೇ ಬಳಸುತ್ತಿದ್ದರು. ಈ ಮಧ್ಯಕಾಲದಲ್ಲಿ ಕೆಲವರು ಗ್ರಂಥಗಳಲ್ಲಿ ಬರೆಯುವಾಗ, ವ್ಯಭಿಚಾರಿ ಎನ್ನುವ ಪದವನ್ನು ಉಪಯೋಗಿಸಿ ಬರೆಯುತ್ತಿದ್ದಾರೆ. ಸೂಳೆ ಎಂದರೇ ಒಬ್ಬ ಪುರುಷನೊಂದಿಗೆ ಶರೀರ ಸಂಬಂಧ ಇಟ್ಟುಕೊಳ್ಳದೆ ಮತ್ತೊಬ್ಬ ಪುರುಷನೊಂದಿಗೆ ಕೂಡಾ ಸಂಬಂಧ ಇಟ್ಟುಕೊಂಡಿದ್ದಾಳೆಂದು ಅರ್ಥ. ಒಬ್ಬ ಪುರುಷನೊಂದಿಗಲ್ಲದೆ ಮತ್ತೊಬ್ಬ ನೊಂದಿಗಾಗಲಿ, ಅದಕ್ಕಿಂತ ಹೆಚ್ಚ ಜನರೊಂದಿಗಾಗಲಿ ಸಂಬಂಧ ಇರುವವರನ್ನು ಸೂಳೆ ಎಂದರೂ, ಅರ್ಥದ ಪ್ರಕಾರ ಒಬ್ಬ ಪುರುಷನೊಂದಿಗೆ ಅಲ್ಲದೇ ಎರಡನೇ ಪುರುಷನೊಂದಿಗೆ ಸಂಬಂಧ ಇಟ್ಟುಕೊಂಡಾಗಲೇ ಆ ಸ್ತ್ರೀಯನ್ನು ಸೂಳೆ ಎನ್ನುವುದು ನಡೆಯುತ್ತಿದೆ. ಎರಡನೆ ಪುರುಷನೊಂದಿಗೆ ಸಂಬಂಧ ಇಟ್ಟು ಕೊಂಡಾಗ ಆಕೆಗೆ ಸಂತಾನ ಉಂಟಾದರೆ, ಹುಟ್ಟಿದ ಮಗು ಯಾರ ಬೀಜದಿಂದ ಹುಟ್ಟಿರುವುದು ತಾಯಿಗೆ ಕೂಡಾ ಗೊತ್ತಿಲ್ಲ. ತಿಳಿಯದಂತೆ ಹುಟ್ಟಿಸಿ ಕೊಂಡಿದ್ದಾಳೆಂದು ಹೇಳುವುದಕ್ಕೆ "ಸೂಳೆ" ಎಂದು ಕರೆದಿದ್ದಾರೆ. ಸಹಜವಾಗಿ ಒಬ್ಬ ಪುರುಷನೊಂದಿಗೆ ಸಂಬಂಧ ಹೊಂದಿದ ಸ್ತ್ರೀಗೆ, ತನ್ನ ಮಗುವಿಗೆ ತಂದೆ ಯಾರೋ ತಿಳಿದಿರುತ್ತದೆ. ಆದರೇ ಸಹಜವಾಗಿ ಅಲ್ಲದೇ ಇಬ್ಬರೊಂದಿಗೆ ಸಂಬಂಧ ಇಟ್ಟುಕೊಂಡಾಗ ತನ್ನ ಮಗುವಿಗೆ ತಂದೆ ಯಾರೋ ಖಚಿತವಾಗಿ ಹೇಳಲಾರದ ಸ್ಥಿತಿಯಲ್ಲಿ ತಾಯಿ ಇರುತ್ತಾಳೆ. ಅಂತಹ ಸ್ತ್ರೀಯನ್ನು ಸೂಳೆ ಎನ್ನುವುದು ನಡೆದಿದೆ. ಇದೇ ವಿಷಯಕ್ಕೆ ಸಮಾನವಾದ ಪ್ರಪಂಚ ವಿಷಯವಿದ್ದರೇ, ಅಲ್ಲಿ ಖಚಿತವಾಗಿ ಇದು ಎಂದು ಹೇಳಲಾರದ ಸ್ಥಿತಿ ಏರ್ಪಟ್ಟಾಗ, "ಸೂಳೆ ಮಗನಿಗೆ ತಂದೆ ಯಾರು" ಎಂಬ ಗಾದೆಯನ್ನು ಬಳಸುತ್ತಿರುತ್ತಾರೆ.

ಒಬ್ಬ ಸ್ತ್ರೀ ತನ್ನ ಮಗುವಿಗೆ ನಿಜವಾದ ತಂದೆ ಇಂತಹವನೆಂದು ತಿಳಿಯದಿರುವಾಗ ಆಕೆಯನ್ನು ಸೂಳೆ ಎಂದು ಕರೆಯುವುದು ನಡೆಯುತ್ತಿದೆ. ಈ ಸೂತ್ರದ ಪ್ರಕಾರ, ತನ್ನ ಮಗುವಿಗೆ ನಿಜವಾದ ತಂದೆ ಈತನೆ ಎಂದು ನಿರ್ಣಯಿಸಿ ಹೇಳಿದಂತಹ ಸ್ತ್ರೀಯನ್ನು ಸೂಳೆ ಎನ್ನಬಾರದು. ಸೂಳೆ ಎಂದರೇ ಹುಟ್ಟಿದ ಸಂತಾನವೊಂದರ ತಂದೆಯನ್ನು ಕುರಿತು ತಿಳಿಯದಿರುವುದೆಂದು

ಅರ್ಥ ಇರುವಾಗ, ಇಂತಹವನೇ ತನ್ನ ಮಗುವಿಗೆ ತಂದೆಯೆಂದು ತಿಳಿದಾಗ, ಸೂಳೆ ಎನ್ನುವ ಪದ ಆಕೆಗೆ ಅನ್ವಯಿಸುವುದಿಲ್ಲ. ಒಂದು ಊರಿನಲ್ಲಿ ಒಬ್ಬ ಸ್ತ್ರೀಗೆ ಮದುವೆಯಾಗಿ ಹತ್ತು ವರ್ಷಗಳಾಗಿದೆ. ಆದರೂ ಆಕೆಗೆ ಸಂತಾನ ಉಂಟಾಗಲಿಲ್ಲ. ಆಕೆಗೆ ತನ್ನ ಗಂಡ ಪುರುಷತ್ವವು ಇಲ್ಲದವನೆಂದು ತಿಳಿದಿದೆ, ಆದ್ದರಿಂದ ಆಕೆಗೆ ತನ್ನ ಗಂಡನ ಮೂಲಕ ಮಕ್ಕಳು ಹುಟ್ಟುವುದಿಲ್ಲವೆಂದು ತಿಳಿದಿದೆ. ಹಾಗಿರುವಾಗ ಅರಣ್ಯದಲ್ಲಿರುವ ಒಬ್ಬ ಮಹರ್ಷಿ ಹತ್ತಿರಕ್ಕೆ ಹೋಗಿ, ಸಂತಾನವನ್ನು ಕುರಿತು ಕೇಳಿ ತಿಳಿದುಕೊಳ್ಳಬೇಕೆಂದುಕೊಂಡಿದ್ದಾಳೆ. ಒಂದು ಒಳ್ಳೆಯ ದಿನ ಆ ಮಹರ್ಷಿ ಹುಟ್ಟಿದ ದಿನದಂದು ಎಲ್ಲರೊಂದಿಗೆ ಆಕೆಯು ಕೂಡಾ ಅರಣ್ಯಕ್ಕೆ ಹೋಗಿದ್ದಾಳೆ. ಆ ಮಹರ್ಷಿ 120 ವರ್ಷಗಳು ಬದುಕಿ, 121 ನೇ ಹುಟ್ಟಿದದಿನ ಬಂದಾಗ ಎಷ್ಟೋಮಂದಿ ಜನರು ಹೋಗುತ್ತಿರುವಾಗ ಆಕೆಯು ಕೂಡಾ ಹೋಗಿದ್ದಾಳೆ. ಎರಡು ದಿನಗಳು ಅಲ್ಲಿಯೇ ಇದ್ದು ಯಾರೂ ಇಲ್ಲದ ಸಮಯದಲ್ಲಿ ತನ್ನ ಸಂತತಿಯನ್ನು ಕುರಿತು ಕೇಳಿದ್ದಾಳೆ. ತನ್ನ ಗಂಡನ ವಿಷಯ ಕೂಡಾ ಹೇಳಿದ್ದಾಳೆ. ಆಕೆ ಹೇಳಿರುವುದೆಲ್ಲಾ ಕೇಳಿದ ಮಹರ್ಷಿ ಆಕೆಯೊಂದಿಗೆ ಹೀಗೆ ಹೇಳಿದ್ದಾನೆ. "ನನ್ನ 122ನೇ ಜನ್ಮದಿನಕ್ಕೆ ಮಗನನ್ನು ಎತ್ತಿಕೊಂಡು ಬರುತ್ತೀಯಾ" ಎಂದು ಹೇಳಿ ಕಳಿಸಿದ್ದಾನೆ. ಆ ಮಹರ್ಷಿ ಹೇಳಿದ ಮಾತಿಗೆ ಸಂತೋಷಿಸಿದ ಆಕೆ ತನ್ನ ಮನೆಗೆ ಬಂದಿದ್ದಾಳೆ. ಮನಗೆ ಬರುವ ಸಮಯದಲ್ಲಿ ಆಕೆಯೊಂದಿಗೆ ಉಳಿದ ಐದುಜನ ಮಳೆಯರು ಕೂಡಾ ಇದ್ದಾರೆ. ಆರು ಜನ ಅರಣ್ಯದಲ್ಲಿ ಬರುತ್ತಿರುವಾಗ ಹತ್ತುಜನರ ಕಳ್ಳರ ಗುಂಪು ಅವರ ಮೇಲೆ ದಾಳಿ ಮಾಡಿದೆ. ಅರಣ್ಯದ ದಾರಿ ಎರಡುಕಡೆ, ಪೂರ್ತಿಯಾಗಿ ಗಿಡಗಳ ಪೊದೆಯಿಂದ ತುಂಬಿಕೊಂಡಿದೆ. ಹತ್ತುಜನ ಕಳ್ಳರು, ಆರು ಜನ ಹೆಂಗಸರಿಗೆ ಕಾಣಿಸುತ್ತಲೇ ಅವರು ಕಳ್ಳರಿಂದ ತಪ್ಪಿಸಿಕೊಳ್ಳಬೇಕೆಂದು ಪಕ್ಕದಲ್ಲಿಯೇ ಇರುವ ಪೊದೆಯೊಳಗೆ ಓಡಿಹೋಗಿದ್ದಾರೆ. ಆದರೂ ಕಳ್ಳರು ಅವರನ್ನು ಬಿಡದಂತೆ, ಹಿಡಿದುಕೊಂಡು ಅವರಹತ್ತಿರವಿರುವ ಆರಭರಣಗಳನ್ನು ಕಸಿದುಕೊಂಡಿದ್ದಾರೆ. ಕಳ್ಳರನ್ನು ನೋಡುತ್ತಲೇ ಪಕ್ಕದ ಪೊದೆಗಳೊಳಗೆ ಹೋಗಿ ಬಚ್ಚಿಟ್ಟುಕೊಳ್ಳಬೇ ಕೆಂದರೂ ಅವರ ಪ್ರಯತ್ನ ಫಲಿಸಲಿಲ್ಲ. ಆದರೇ ಅಲ್ಲಿನ ಸಂತತಿಗಾಗಿ ಹೋದ ಸ್ತ್ರೀ ಒಂದುಕಡೆ ಒಬ್ಬಳೇ ಹೋಗಿರುವುದರಿಂದ ಆಕೆ ಒಬ್ಬಂಟಿಗಳಾಗಿದ್ದಾಳೆ.

ಕಳ್ಳರು ಪೊದೆಯಲ್ಲಿರುವವರನ್ನು ಹುಡುಕಿ ಹಿಡಿದುಕೊಂಡಿದ್ದಾರೆ. ಒಬ್ಬ ಕಳ್ಳನಿಗೆ ಆಕೆ ಒಬ್ಬಳೇ ಸಿಕ್ಕಿದ್ದಾಳೆ. ಆಗ ಆ ಕಳ್ಳನು ಆಕೆಯ ಒಡವೆಗಳನ್ನು ಕಿತ್ತುಕೊಳ್ಳುವುದೇ ಅಲ್ಲದೇ, ಆಕೆಯನ್ನು ಪೊದೆಗಳ ಮಧ್ಯದಲ್ಲಿ ಬಲವಂತವಾಗಿ ಮಾನಭಂಗ ಮಾಡಿಹೋಗಿದ್ದಾನೆ. ಅಲ್ಲಿ ನಡೆದ ವಿಷಯ ಉಳಿದವರ್‍ಯಾರಿಗು ತಿಳಿದಿಲ್ಲ. ಕಳ್ಳರೆಲ್ಲರೂ ಹೆಂಗಸರೆಲ್ಲರನ್ನು ದಾರಿಗೆ ಎಳೆದುಕೊಂಡು ಬಂದು, ತಾವು ತಮ್ಮ ಒಡವೆಗಳನ್ನು ಕದ್ದಿರುವಂತೆ ಪೊಲೀಸರಿಗೆ ಹೇಳಿದರೆ, ನಂತರ ನಿಮ್ಮ ಮನೆಗೆ ಬಂದು ಸಾಯಿಸುತ್ತೇವೆಯೆಂದು ಬೆದರಿಸಿ ಹೋಗಿದ್ದಾರೆ. ಈ ವಿಧವಾಗಿ ಉಳಿದ ಐದುಜನ ಹೆಂಗಸರು ತಮ್ಮ ಒಡವೆಗಳನ್ನ ಕಳೆದುಕೊಂಡಿದ್ದಾರೆ. ಸಂತಾನಕ್ಕಾಗಿ ಹೋದ ಸ್ತ್ರೀಗೆ ಒವಡೆಗಳೆ ಅಲ್ಲದೇ ಶೀಲ ಕೂಡಾ ಹೋಗಿದೆ.

ಅರಣ್ಯದಲ್ಲಿ ಹೊರಟಿರುವ ಹೆಂಗಸರೆಲ್ಲರೂ ಒಂದೇ ಊರಿನವರು. ಆದ್ದರಿಂದ ಎಲ್ಲರೂ ಸೇರಿ, ಸಾಯಂಕಾಲಕ್ಕೆ ತಮ್ಮ ಊರು ಸೇರಿಕೊಂಡಿದ್ದಾರೆ. ಒಂದು ತಿಂಗಳಕಾಲ ಕಳೆದುಹೋದ ನಂತರ ಸಂತಾನಕ್ಕಾಗಿ ಅರಣ್ಯಕ್ಕೆ ಹೋಗಿ ವೃದ್ಧ ಮಹರ್ಷಿಯನ್ನು ಕೇಳಿಬಂದ ಮಹಿಳೆಗೆ ಗರ್ಭನಿಂತಂತೆ ತಿಳಿದಿದೆ. ಆಕೆಗೆ ಏನು ಅರ್ಥವಾಗಲಿಲ್ಲ. ಆಕೆ ಗಂಡ ಮತ್ತು ಮನೆಯಲ್ಲಿನವರು ಇದೆಲ್ಲಾ ಮಹರ್ಷಿಯ ಮಹಿಮೆಯೇ ಎಂದುಕೊಂಡಿದ್ದಾರೆ. ನಂತರ ಒಂಭತ್ತು ತಿಂಗಳಿಗೆ ಮಗನನ್ನು ಪ್ರಸವಿಸಿದ ಆಕೆ, ಅರಣ್ಯದೊಳಗೆ ಮಹರ್ಷಿವೊಂದರ 122ನೇ ಜನ್ಮದಿನಕ್ಕೆ ತನ್ನ ಮೂರು ತಿಂಗಳ ಮಗನೊಂದಿಗೆ ಕೂಡಿ ಹೋಗಿದ್ದಾಳೆ. ಎರಡು ದಿನಗಳು ಅಲ್ಲಿಯೇ ಇದ್ದು, ಕೊನೆಗೆ ಮಹರ್ಷಿಯನ್ನು ದರ್ಶಿಸಿ, ತಮ್ಮ ಪುತ್ರನನ್ನು ಮಹರ್ಷಿ ಪಾದಗಳ ಬಳಿ ಇಟ್ಟು ನಮಸ್ಕರಿಸಿದ್ದಾಳೆ. ಆಗ ಆಕೆಯನ್ನು ನೋಡಿದ ಮಹರ್ಷಿ ಒಂದುಸಲ ನಗುತ್ತಾ ಹೀಗೆ ಹೇಳಿದ್ದಾನೆ.

**ಮಹರ್ಷಿ :–** ಏನು ಮಗಳೇ ನಿನ್ನ ಕೋರಿಕೆ ನೆರವೇರಿದಿ ಅಲ್ಲವೇ! ಏಕೆ ಚಿಂತೆಯಿಂದ ಇದ್ದೀಯಾ?

**ಮಹಿಳೆ :–** ಸ್ವಾಮೀ! ನಿಮಗೆ ತಿಳಿಯದಿರುವುದು ಏನಿದೆ?

**ಮಹರ್ಷಿ :–** ನೀನು ಹೇಗೆ ಅಂದುಕೊಂಡರೂ ನನಗೆ ಏನು ಗೊತ್ತಿಲ್ಲ. ನಿನ್ನ

ಊಹೆಗೆ ನಾನು ದೊಡ್ಡದಾಗಿ ಕಾಣಿಸಿದರೂ. ನನ್ನ ಸ್ಥಿತಿಯೇನೋ ನನಗೆ ಗೊತ್ತಿದೆ. ನಿನ್ನ ಸ್ಥಿತಿ ನನಗೆ ತಿಳಿದಿಲ್ಲ. ಆದಕಾರಣ ಏಕೆ ದಿಗಿಲುನಿಂದ ಇದ್ದೀಯಾ ಎಂದು ಕೇಳಿದ್ದೇನೆ.

**ಮಹಿಳೆ :–** ನನ್ನಲ್ಲಿ ಒಂದು ವೇದನೆ ಇದೆ. ಅದುಯಾರಿಗೂ ತಿಳಿದಿಲ್ಲ. ನಿಮ್ಮೊಂದಿಗೆ ಹೇಳಿಕೊಳ್ಳುವವರೆಗು ನನ್ನ ಮನಸ್ಸು ಚಡಪಡಿಸುತ್ತಿದೆ.

**ಮಹರ್ಷಿ :–** ಪ್ರಪಂಚ ವಿಷಯಗಳಿಗೆ ದೂರವಾಗಿ ಇರುವವನು, ನನ್ನೊಂದಿಗೆ ಹೇಳುವುದರಲ್ಲಿ ತಪ್ಪಿಲ್ಲ. ನಿನ್ನ ಬಾಧೆ ಏನೋ ಹೇಳು.

**ಮಹಿಳೆ :–** ನಿಮ್ಮನ್ನು ತಾಕುವುದಕ್ಕು ಕೂಡಾ ನನಗೆ ಅರ್ಹತೆ ಇದೆಯೋ ಇಲ್ಲವೋ ತಿಳಿದಿಲ್ಲ, ನೀವು ಹೇಳೆನ್ನುತ್ತಿದ್ದೀರ ಆದ್ದರಿಂದ ಧೈರ್ಯವಾಗಿ ಹೇಳುತ್ತಿದ್ದೇನೆ. ನಾನು ಅಕ್ರಮ ಸಂತಾನವನ್ನು ಹೊಂದಿದ್ದೇನೆ. ಆದ್ದರಿಂದ ನಾನು ತಪ್ಪುಮಾಡಿದ್ದೇನೆ ಎನ್ನುವ ಭಾವನೆ ನನ್ನಲ್ಲಿ ಉಳಿದುಹೋಗಿದೆ. ಅದೇ ನನಗೆ ಬಾಧೆಯಾಗಿದೆ.

**ಮಹರ್ಷಿ :–** ಅಕ್ರಮ ಸಂತಾನವೇನು? ನೀನು ತಪ್ಪು ಮಾಡುವುದೇನು? ನಿನಗೆ ಭಾಧೆಯಾಗಿ ಇರುವುದೇನು? ಇರುವುದು ಇದ್ದಂತೆ ಹೇಳು! ಅದಕ್ಕೆ ಸಮಾಧಾನವನ್ನು ಹೇಳುತ್ತೇನೆ.

**ಮಹಿಳೆ :–** ಹೋದ ವರ್ಷ ನಿಮ್ಮ ಹತ್ತಿರ ಆಶೀರ್ವಾದ ತೆಗೆದುಕೊಂಡು ಹೊರಟು ನಾನು, ನನ್ನೊಂದಿಗೆ ಇನ್ನು ಐದುಜನ ಹೆಂಗಸರು ಸೇರಿ ಅರಣ್ಯ ಮಾರ್ಗದಲ್ಲಿ ಹೋಗುತ್ತಿರುವಾಗ, ನಮ್ಮ ಮೇಲೆ ಕಳ್ಳರು ದಾಳಿ ಮಾಡಿದ್ದಾರೆ. ಪಕ್ಕದ ಪೊದೆಯಲ್ಲಿ ಅಡಗಿದ್ದ ನನ್ನನ್ನು ಕಳ್ಳನು ಕಂಡುಹಿಡಿದು, ಹಿಡಿದುಕೊಂಡು ನನ್ನ ಒಡವೆಯನ್ನು ಕಿತ್ತುಕೊಳ್ಳುವುದೇ ಅಲ್ಲದೇ, ನನ್ನನ್ನು ಮಾನಭಂಗ ಮಾಡಿದ್ದಾನೆ. ಆ ವಿಷಯವನ್ನು ನಾನು ಇಲ್ಲಿಯವರೆಗು ಯಾರೊಂದಿಗೆ ಹೇಳಲಿಲ್ಲ. ಹಾಗೆ ನಡೆಯುವುದರಿಂದ ಈ ಮಗ ಹುಟ್ಟಿದ್ದಾನೆ. ನನ್ನ ಜೀವನದಲ್ಲಿ ಇಲ್ಲಿಯವರೆಗು ನನ್ನ ಗಂಡನನ್ನೇ ನಂಬಿಕೊಂಡಿರುವವಳು, ಎಂದಿಗೂ ಯಾವ ತಪ್ಪು ಮಾಡಲಿಲ್ಲ. ಆ ವಿಧವಾಗಿ ನಡೆದಿರುವುದರಿಂದ ನನಗೆ ನೋವಾಗಿದೆ. ನಾನು ತಪ್ಪು ಮಾಡಿದ್ದೇನೆ ಎನ್ನುವ ಭಯ ನನ್ನಲ್ಲಿದೆ.

**ಮಹರ್ಷಿ :–** ನಿನ್ನ ಪ್ರಮೇಯ ಇಲ್ಲದೇ ನಡೆದಿರುವ ಕೆಲಸಕ್ಕೆ ನೀನು ಜವಾಬ್ಧಾರಿಯಲ್ಲ ಅಲ್ವಾ! ಆಗ ಆ ತಪ್ಪನ್ನು ನಾನು ಮಾಡಿದ್ದೇನೆ ಎಂದು ಅಂದುಕೊಳ್ಳುವುದು ತಪ್ಪಲ್ಲವೇ!

**ಮಹಿಳೆ :–** ಈಗ ನಿಮ್ಮ ಮಾತಿನಿಂದ ನನ್ನ ತಪ್ಪಿಲ್ಲವೆಂದು ತಿಳಿಯುತ್ತಿದೆ. ಅದಕ್ಕೆ ನಾನು ಧನ್ಯಳು. ಆದರೇ ನನ್ನ ಮನಸ್ಸಿನಲ್ಲಿ ನಾನು ಅಕ್ರಮ ಸಂತತಿ ಹೊಂದಿದ್ದೇನೆಂದು ದಿಗುಲಾಗಿದೆ. ಅದಕ್ಕೆ ಬೆಲೆಯುಳ್ಳ ನಿಮ್ಮ ಸಲಹೆಯನ್ನು ಕೇಳಬೇಕೆಂದುಕೊಳ್ಳುತ್ತಿದ್ದೇನೆ.

**ಮಹರ್ಷಿ :–** ಈ ಲೋಕದಲ್ಲಿ ಎಲ್ಲರೂ ಗೊಂಬೆಗಳೇ. ಆಡಿಸುವವನು ಬೇರೆ ಪ್ರತ್ಯೇಕವಾಗಿದ್ದಾನೆ. ಅವನು ಆಡಿಸಿದಂತೆ ಮಾನವ ಗೊಂಬೆಗಳು ಆಡುತ್ತಿವೆ. ಯಾವ ಆಟವನ್ನಾದರೂ ಯಾರೂ ಸ್ವಂತವಾಗಿ ಆಡಲಾರರು. ದೇವರಿಗೆ ತಿಳಿಯದಂತೆ ಏನು ನಡೆಯುವುದಿಲ್ಲ. ಅಲ್ಲಿ ನಡೆದಿರುವುದು ಕೂಡಾ ಆತನ ಆಜ್ಞೆ ಇಲ್ಲದೆ ನಡೆಯುವುದಿಲ್ಲ. ಅದೇ ಕೆಲಸವಾಗಿ ಸಂತತಿ ಬೇಕೆಂದು ಗಂಡಹೆಂಡತಿ ಎಷ್ಟೋಸಲ ಕೂಡಿ, ಎಷ್ಟೋಕಾಲ ಕಾದುನೋಡಿದರೂ ಕೂಡಾ, ಎರಡು ವರ್ಷಗಳಿಗೋ, ಮೂರು ವರ್ಷಗಳಿಗೋ ಅದಕ್ಕಿಂತ ಹೆಚ್ಚು ಕಾಲಕ್ಕೋ, ಸಂತತಿ ಉಂಟಾಗುತ್ತಿರುವುದು ಎಲ್ಲರಿಗೂ ತಿಳಿದ ವಿಷಯವೇ. ಅಂತಾದ್ದು, ಒಂದುಸಲ ಪುರಷ ಸಂಬಂಧ ಉಂಟಾದ ತಕ್ಷಣ ಅದೇ ಗರ್ಭಕ್ಕೆ ಕಾರಣ ಆಗುವುದು ವಿಚಿತ್ರ ಅಲ್ಲವೇ! ನಿನ್ನ ಗಂಡನ ಒಂದು ಸಾಮರ್ಥ್ಯವನ್ನು ಕುರಿತು ನೀನು ಹೇಳಿದಾಗ, ನಿನಗೆ ಸಂತತಿ ಉಂಟಾಗುವುದಿಲ್ಲವೆಂದು ತಿಳಿದು ಕೂಡಾ, ನನ್ನ ಬಾಯಿ ಮೂಲಕ ಮುಂಬರುವಂತಹ ವರ್ಷ ಮಗನನ್ನು ಎತ್ತಿಕೊಂಡು ಬರಲು ಹೇಳುವುದು ಆಶ್ಚರ್ಯ ಅಲ್ಲವೇ! ದಾರಿ ದರೋಡೆಯಲ್ಲಿ ನೀನೊಬ್ಬಳು ಪಕ್ಕಕ್ಕೆ ಹೋಗುವುದೂ, ಬಂದವನು ಒಡವೆಗಳು ತೆಗೆದುಕೊಂಡು ಹೋಗದಂತೆ ಹಾಗೆ ಮಾಡುವುದು ಕೂಡಾ ವಿಚಿತ್ರ ಅಲ್ಲವೇ! ನನ್ನ ಮಾತಿನ ಪ್ರಕಾರ ನಿನಗೆ ಮಗ ಹುಟ್ಟುವುದು ಕೂಡಾ ಆಶ್ಚರ್ಯ ಅಲ್ಲವೇ!

**ಮಹಿಳೆ :–** ನೀವು ಹೇಳಿದಂತೆ ಈ ಮಗು ನೀವುಕೊಟ್ಟಿರುವ ವರಪ್ರಸಾದವಾಗಿ ಭಾವಿಸಿದರೂ, ಈ ಮಗುವಿಗೆ ನನ್ನ ಗಂಡ ತಂದೆಯಲ್ಲ ಅಲ್ಲವೇ! ಎನ್ನುವ

ಸಂಶಯ ಒಂದುಕಡೆ ಪೀಡಿಸುತ್ತಿದೆ. ನನ್ನ ಗಂಡ ಮಾತ್ರ ನಿಮ್ಮ ಆಶೀರ್ವಾದಿಂದ ಉಂಟಾದ ಮಗನೆಂದೇ ತಿಳಿದು, ತನಗೆ ಹುಟ್ಟಿದ ಮಗನೇ ಎಂದುಕೊಳ್ಳುತ್ತಿದ್ದಾನೆ. ಆತನಿಗೆ ಆತನ ಮಗನೇ ಎಂದೂ ಇದ್ದರೂ, ನನಗೆ ಮಾತ್ರ ಈ ಮಗು ಆತನ ಮಗನಲ್ಲ ಎಂದೇ ಇದೆ. ಇಂತಹ ಆಲೋಚನೆಯಲ್ಲಿ ನಾನು ಜಾರಿಣಿ ಅಲ್ಲವೇ!

**ಮಹರ್ಷಿ :–** ಯಾರು ಜಾರಿಣಿ? ಯಾರು ಜಾರಿಣಿ ಅಲ್ಲ? ಎನ್ನುವುದಕ್ಕೆ ಒಂದು ಸೂತ್ರವಿದೆ ಯಾವ ತಾಯಿಗಾದರೂ ತನ್ನ ಮಗುವಿಗೆ ತಂದೆ ಯಾರೆಂದು ತಿಳಿಯದಿರುವಾಗ ಆಕೆಯನ್ನು ಜಾರಿಣಿ (ಸೂಳೆ) ಎಂದು ಕರೆಯಬಹುದು. ತನ್ನ ಮಗನಿಗೆ ಇಂತಹವನೆ ತಂದೆಯೆಂದು ತಿಳಿದಾಗ ಆಕೆಯನ್ನು ಜಾರಿಣಿ ಎನ್ನುವುದಕ್ಕೆ ಸಾಧ್ಯವಿಲ್ಲ.

**ಮಹಿಳೆ :–** ಮಗನಿಗೆ ತಂದೆ ಇಂತಹವನೆಂದು ಖಚಿತವಾಗಿ ತಿಳಿದರೂ, ತನಗೆ ಇಬ್ಬರು ಪುರುಷರಿದ್ದಾರೆಂದು ತಿಳಿಯುತ್ತದೆ ಅಲ್ಲವೇ! ತನ್ನ ಗಂಡನಿಂದಲ್ಲದೇ ಇತರರಿಂದ ಸಂತತಿ ಹೊಂದುವುದು ವ್ಯಭಿಚಾರವೇ ಅಲ್ಲವೇ! ನನ್ನ ಪರಿಸ್ಥಿತಿ ಅದೇ ಅಲ್ಲವೇ!

**ಮಹರ್ಷಿ :–** ನಿನಗೆ ಗಂಡ ಒಬ್ಬನಿದ್ದಾನೆ. ಆತನಿಂದ ಸಂತತಿ ಉಂಟಾ ಗಲಿಲ್ಲವೆಂದು ತಿಳಿದಿದೆ, ಊಹಿಸದ ಸಂಘಟನೆಯಿಂದ ಸಂತತಿ ಉಂಟಾದರೂ ಅದು ನಿನಗೆ ಸಂಬಂಧವಿಲ್ಲ. ಆ ಕಳ್ಳ ಯಾರೊ ಮೊದಲು ಗೊತ್ತಿಲ್ಲ, ನಂತರ ತಿಳಿದಿಲ್ಲ. ನೀನು ಬೇಕೆಂದು ಮಾಡಿದ ಕೆಲಸವಲ್ಲ. ಆದಕಾರಣ ಅದು ವ್ಯಭಿಚಾರವಲ್ಲ. ಆ ಪಾಪ ನಿನಗೆ ಬರುವುದಿಲ್ಲ. ಹೋರಗಿನ ಪ್ರಪಂಚದಲ್ಲಿ ಗಂಡ ಒಬ್ಬನೇ ಅಲ್ಲದೆ ಮತ್ತೊಬ್ಬ ಪುರುಷನೊಂದಿಗೆ ಸಂಬಂಧ ಇಟ್ಟುಕೊಂಡಾಗ, ಹುಟ್ಟಿದ ಮಗು ಇಬ್ಬರಲ್ಲಿ ಯಾರಿಗೆ ಹುಟ್ಟಿದ್ದಾನೋ ತಿಳಿಯದಿರುವಾಗ ಅದನ್ನು ವ್ಯಭಿಚಾರ ಎನ್ನಬಹುದು. ಈ ವಿಷಯಗಳನ್ನು ಜ್ಞಾನ ತಿಳಿದ ನಾನೇ ಅಲ್ಲದೇ ಅಜ್ಞಾನಿಗಳು ಕೂಡಾ ಹೇಳುತ್ತಾರೆ. ಇನ್ನು ಜ್ಞಾನದ ಪ್ರಕಾರ ಹೇಳಲ್ಪಟ್ಟರೆ, ನೀನೇ ಅಲ್ಲ ಜ್ಞಾನ ತಿಳಿಯದ ಎಲ್ಲರನ್ನು ವ್ಯಭಿಚಾರರೇ ಎಂದು ಹೇಳಬೇಕಾಗಿ ಬರುತ್ತದೆ. ಹಾಗೆ ಏಕೆ ಹೇಳಬೇಕಾಗಿ ಬಂದಿದೆ ಎಂದರೆ! ಭೂಮಿಮೇಲೆ ಪ್ರತಿ ಸ್ತ್ರೀಗು ಮದುವೆ ಆಗುವುದು ಒಬ್ಬ ಗಂಡ ಇರುವುದು ಸಹಜವೇ. ಆತನು ಕಾಣಿಸುವ ಗಂಡನಾಗಿದ್ದು, ಪ್ರತಿ ಸ್ತ್ರೀಗು ಕಾಣಿಸದ ಗಂಡ ಒಬ್ಬನಿದ್ದಾನೆ.

ಜಗತಿನಲ್ಲಿನ ಸ್ತ್ರೀಯರೆಲ್ಲರಿಗೂ ಆತನೊಬ್ಬನೇ ಗಂಡ ಆಗಿರುವುದರಿಂದ ಆತನನ್ನು "ಜಗತ್‌ಪತಿ" ಎಂದು ಕೂಡಾ ಕರೆಯುತ್ತಿದ್ದಾರೆ. ಜಗತ್ತಿಗೆಲ್ಲ ಪತಿ ಆದವನು ದೇವರೇಯೆಂದು ತಿಳಿಯಬೇಕು. ಪ್ರತಿ ಸ್ತ್ರೀಗು ತನಗೆ ತಿಳಿದರೂ, ತಿಳಿಯದೆ ಹೋದರೂ, ಕಾಣಿಸದ ಒಬ್ಬ ಪತಿ ಇದ್ದಾನೆ. ಯುಕ್ತವಯಸ್ಸು ಬಂದ ನಂತರ ಸ್ತ್ರೀಗೆ ಮದುವೆಯಾದಾಗ ಕಾಣಿಸುವ ಪತಿ ಬರುತ್ತಿದ್ದಾನೆ. ಮೊದಲ ಪತಿ ದೇವರಾಗಿದ್ದು, ಎರಡನೆ ಪತಿಯಾಗಿ ಒಬ್ಬ ಮನುಷ್ಯ ಬರುತ್ತಿದ್ದಾನೆ. ಆ ಲೆಕ್ಕಪ್ರಕಾರ ಮದುವೆಯಾದ ಪ್ರತಿ ಸ್ತ್ರೀಗು ಇಬ್ಬರು ಪತಿಗಳು ಇದ್ದಾರೆಂದು ತಿಳಿಯುತ್ತಿದೆ. ಇಬ್ಬರ ಪತಿಯರೊಂದಿಗಿರುವ ಸ್ತ್ರೀಯನ್ನು ವ್ಯಭಿಚಾರಿ ಎನ್ನಬೇಕು. ಆ ವಿಧವಾಗಿ ನೋಡಿದರೆ ವ್ಯಭಿಚಾರಿಗಳು ಅಲ್ಲದಿರುವವರು ಭೂಮಿಮೇಲೆ ಯಾರೂ ಇಲ್ಲವೆಂದು ತಿಳಿಯುತ್ತಿದೆ.

**ಮಹಿಳೆ :–** ನನ್ನದೊಂದು ಚಿಕ್ಕ ಪ್ರಶ್ನೆ, ಕಾಣಿಸುವ ವ್ಯಕ್ತಿಯನ್ನೇ ಸ್ತ್ರೀ ತನ್ನ ಪತಿಯಾಗಿ ಲೆಕ್ಕಿಸಿಕೊಳ್ಳುತ್ತಾಳೆ ಅಲ್ಲವೇ! ಕಾಣಿಸಿದ ಪತಿ (ಗಂಡ) ಯಾರೋ ಕೂಡಾ ಆಕೆಗೆ ತಿಳಿಯದಿರುವಾಗ ಆಕೆಗೆ ಇಬ್ಬರು ಪತಿಯರಿರುವಂತೆ ಹೇಗೆ ಲೆಕ್ಕಿಸುತ್ತೇವೆ. ಒಬ್ಬ ಪತಿಯನ್ನೇ ಅಂಗೀಕರಿಸಿದ ಸ್ತ್ರೀಗೆ ಎರಡನೆ ಗಂಡ ತಿಳಿಯದಿರುವಾಗ ಆಕೆ ವ್ಯಭಿಚಾರಿಣಿ ಹೇಗೆ ಆಗುತ್ತಾಳೆ?

**ಮಹರ್ಷಿ :–** ಇದಕ್ಕುಮುನ್ನ ಯಾರೊ ಏನೊ ಮಾಡಿದ್ದಾನೆಂದು, ಆತನ ಮುಖಾಂತರ ಸಂತತಿ ಉಂಟಾಗಿದೆಯೆಂದು, ಕಾಣಿಸುವ ಗಂಡನಿಂದ ಸಂತತಿ ಉಂಟಾಗದಂತೆ, ತಿಳಿಯದವನಾದ ಇತರನಿಂದ ಸಂತಾನ ಉಂಟಾಗುವುದರಿಂದ ಅದು ವ್ಯಭಿಚಾರವೇ ಅಲ್ಲವೇ! ಎಂದು ನಿನ್ನನ್ನು ನೀನು ವ್ಯಭಿಚಾರಿಣಿಯಾಗಿ ಹೇಳಿಕೊಂಡಿದ್ದೀಯಾ. ಆತನನ್ನು (ಕಳ್ಳನನ್ನು) ಮೊದಲೂ ನೋಡಲಿಲ್ಲ. ನಂತರ ನೋಡಲಿಲ್ಲ ಆತನೊಂದಿಗೆ ಪರಿಚಯವು ಇಲ್ಲ ಆದರೂ ಆತನಿಂದಲೇ ಸಂತತಿ ಉಂಟಾಗಿದೆಯೆಂದು, ತನ್ನ ಗಂಡನಿಂದ ಉಂಟಾಗಲಿಲ್ಲವೆಂದು ಹಾಗೆ ಹೊಂದಿದ ಸಂತಾನ ಅಕ್ರಮ ಸಂತಾನವೆಂದು, ಅಕ್ರಮ ಸಂತಾನ ಹೊಂದಿದ ನೀನು ತಪ್ಪುಮಾಡಿದಂತೇ ಎಂದು, ವ್ಯಭಿಚರಿಸಿದವಳಾದಂತೆ ಅಲ್ಲವೇ ಎಂದು ನೀನೇ ನನಗೆ ಹೇಳಿದ್ದೀಯಾ. ನೀನು ಹೇಳಿದ ಸೂತ್ರದ ಪ್ರಕಾರ, ಗಂಡನಿಂದ ಅಲ್ಲದೇ

ಇತರರಿಂದ ಸಂತತಿ ಹೊಂದಿದರೆ, ಅದು ವ್ಯಭಿಚಾರವೇ ಆದಂತೆ ಲೆಕ್ಕಿಸಿದಂತಾಗುತ್ತದೆ. ಆದೇ ಪತಿ ಸ್ತ್ರೀಗೆ ತನ್ನ ಗಂಡನಿಂದ ಸಂತತಿ ನಡೆಯದಿರುವಾಗ, ಕಾಣಿಸದ ಎರಡನೆ ವ್ಯಕ್ತಿ ಮುಖಾಂತರ ಸಂತತಿ ನಡೆದಾಗ ಸ್ತ್ರೀಯರೆಲ್ಲರನ್ನು ಏನನ್ನಬೇಕು? ವ್ಯಭಿಚಾರಿಗಳೆಂದೆ ಅನ್ನಬೇಕು ಅಲ್ಲವೇ! ಈಗ ಅಸಲು ವಿಷಯಕ್ಕೆ ಬರೋಣ. ಪ್ರಪಂಚದಲ್ಲಿ ಯಾವ ಸ್ತ್ರೀಗೆ ಸಂತಾನ ಉಂಟಾದರೂ, ಯಾವ ಸ್ತ್ರೀ ಗರ್ಭದಿಂದ ಯಾರು ಹುಟ್ಟಿದರೂ. ಆ ಸ್ತ್ರೀಗೆ ಬೀಜದಾತನು ನಾನೇ, ಹುಟ್ಟಿದವನಿಗೆ ತಂದೆ ನಾನೇ ಎಂದು ಭಗವದ್ಗೀತೆಯಲ್ಲಿ ಗುಣತ್ರಯ ವಿಭಾಗಯೋಗದಲ್ಲಿ 3,4ನೇ ಶ್ಲೋಕದಲ್ಲಿ ಭಗವಂತನು ಸ್ವತಃವಾಗಿ ಹೇಳಿದ್ದಾನೆ.

**ಶ್ಲೋ॥ ಮಮಯೋನಿ ರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್।**
**ಸಂಭವ ಸರ್ವಭೂತಾನಾಂ ತತೋ ಭವತಿ ಭಾರತ! ॥**

**ಶ್ಲೋ॥ ಸರ್ವಯೋನಿಷು ಕೌಂತೇಯ! ಮೂರ್ತಯಃ ಸಂಭವಂತಿ ಯಾಃ।**
**ತಾಸಾಂ ಬ್ರಹ್ಮ ಮಹದ್ಯೋನಿಃ ಅಹಂ ಬೀಜಪ್ರದಃ ಪಿತಾ ॥**

ಈ ಎರಡು ಶ್ಲೋಕಗಳ ಸಾರಾಂಶವನ್ನು ನೋಡಿದರೆ ಹುಟ್ಟುವಂತಹ ಜೀವರಾಶಿಗಳೆಲ್ಲವುಗಳಿಗು ನಾನೇ ಬೀಜದಾತನು ಆದ್ದರಿಂದ, ಯಾವ ಸ್ತ್ರೀ ಯೋನಿಯಲ್ಲಿ ಯಾರು ಹುಟ್ಟಿದರೂ, ಇಲ್ಲವೇ ಯಾವ ತಾಯಿ ಗರ್ಭದಿಂದ ಹುಟ್ಟಿದ ಜೀವರಾಶಿಗಾದರೂ ತಂದೆ ನಾನೇ ಎಂದು ದೇವರು ಹೇಳಿದಂತೆ ತಿಳಿಯುತ್ತಿದೆ. ಇದರ ಪ್ರಕಾರ ಯಾವ ಸ್ತ್ರೀಯೊಂದರ ಕಾಣಿಸುವ ಗಂಡನಿಗೆ, ಯಾರೂ ಹುಟ್ಟಲಿಲ್ಲವೆಂದು ತಿಳಿಯುತ್ತಿದೆ. ಹಾಗಿರುವಾಗ ತಮ್ಮ ಮಗನಿಗೆ ನಿಜವಾದ ತಂದೆ ಯಾರೋ ತಿಳಿಯದೆ, ತಂದೆಯಲ್ಲದವನನ್ನು ತಂದೆಯೆಂದು ಹೇಳುವುದರಿಂದ ಆ ಸ್ತ್ರೀಯನ್ನು ವ್ಯಭಿಚಾರಿಣಿಯಾಗಿ ಲೆಕ್ಕಸಲಾಗುತ್ತದೆ. ಹಾಗೆ ಅಲ್ಲದೇ ಮೇಲಿನ ಶ್ಲೋಕಗಳೊಂದರ ಜ್ಞಾನ ತಿಳಿದು, ಯಾವ ಸ್ತ್ರೀ ಆದರೂ ತನಗೆ ಕಾಣಿಸದ ಗಂಡನೊಬ್ಬನಿದ್ದಾನೆಂದು, ಆತನಿಂದಲೇ ತನಗೆ ಸಂತಾನವು ಉಂಟಾಗಿದೆಯೆಂದು, ತನ್ನ ಮಗನಿಗೆ ನಿಜವಾದ ತಂದೆಯನ್ನು ತಿಳಿದಾಗ. ಆಕೆಯದ್ದು ವ್ಯಭಿಚಾರವು ಅಲ್ಲ. ಹಾಗೆ ಅಲ್ಲದೇ ದೈವಜ್ಞಾನ ತಿಳಿಯದ ಯಾವ ಸ್ತ್ರೀ ಆದರೂ, ತನ್ನ ಶಾಶ್ವತ ಗಂಡ, ನಿಜವಾದ ಗಂಡ ಯಾರೋ ತಿಳಿಯದ

ಸ್ತ್ರೀ ಯಾರಾದರೂ ತನ್ನ ಮಗನಿಗೆ ತಂದೆ ಯಾರೋ ತಿಳಿಯದ ಯಾವ ಸ್ತ್ರೀ ಆದರೂ, ತನ್ನ ಗರ್ಭಕ್ಕೆ ಬೀಜ ಯಾರದ್ದೋ ತಿಳಿಯದ ಸ್ತ್ರೀ ಯಾರಾದರೂ, ತನ್ನ ಪತಿ ಜಗತ್‌ಪತಿ ಎಂದು ತಿಳಿಯದೆ, ಜೀವನ ಮಧ್ಯದಲ್ಲಿ ಬಂದು, ಮಧ್ಯದಲ್ಲಿ ಹೋಗುವ ವ್ಯಕ್ತಿಯನ್ನು ಪತಿಯೆಂದುಕೊಳ್ಳುವ ಯಾವ ಸ್ತ್ರೀ ಆದರೂ ವ್ಯಭಿಚಾರಿಣಿಯೇ ಆಗುತ್ತಾಳೆ. ಭಾರತದೇಶದಲ್ಲಿ ರಾಜಸ್ಥಾನದಲ್ಲಿ ಹುಟ್ಟಿದ ಮೀರಾಬಾಯಿ ತನಗೆ ಭೌತಿಕವಾಗಿ ಮದುವೆಯಾದರೂ, ತನ್ನ ನಿಜವಾದ ಮತ್ತು ಶಾಶ್ವತವಾಗಿರುವ ಪತಿ ಜಗತ್‌ಪತಿಯಾದ ಶ್ರೀಕೃಷ್ಣನೇ ಎಂದು ಹೇಳಿದ್ದಾಳೆ. ಕಾಣಿಸುವ ಪತಿಯೊಂದಿಗೆ ಸಂಸಾರ ಮಾಡುತ್ತಿದ್ದರೂ, ಮಾನಸಿಕವಾಗಿ ಆತನನ್ನು ಪತಿಯಾಗಿ ಎಂದಿಗೂ ಆಕೆ ಒಪ್ಪಿಕೊಳ್ಳಲಿಲ್ಲ.

**ಮಹಿಳೆ :–** ಇಷ್ಟುಕಾಲ ನಮಗೆ ದೈವಜ್ಞಾನ ತಿಳಿಯದಿರುವುದರಿಂದ ಕಾಣಿಸುವ ಪತಿಯನ್ನೇ ಮಾನಸಿಕವಾಗಿ, ಭೌತಿಕವಾಗಿ ಒಪ್ಪಿಕೊಂಡಿದ್ದೇವೆ. ಮೀರಾಬಾಯಿ ಹಾಗಲ್ಲದೆ ಭೌತಿಕವಾಗಿ ಕಾಣಿಸುವ ಗಂಡನೊಂದಿಗೆ ಸಂಸಾರ ಮಾಡುತ್ತಿದ್ದರೂ ಮಾನಸಿಕವಾಗಿ ಕೃಷ್ಣನನ್ನೇ ಪತಿಯಾಗಿ ಒಪ್ಪಿಕೊಂಡಿರುವುದು ಸರಿಯಾದ ಪದ್ಧತೀ. ಆದರೇ ಇಲ್ಲಿ ಒಂದು ಸಂಶಯ ಬರುತ್ತಿದೆ, ಅದೇನೆಂದರೇ! ಭೌತಿಕವಾಗಿ ಒಬ್ಬರು, ಮಾನಸಿಕವಾಗಿ ಒಬ್ಬರು ಇರುವಾಗ, ಒಬ್ಬ ಸ್ತ್ರೀಗೆ ಹೇಗೆ ನೋಡಿದರು ಇಬ್ಬರಾಗುತ್ತಿದ್ದಾರೆ ಅಲ್ಲವೇ! ಆಗ ಆಕೆಯದ್ದು ವ್ಯಭಿಚಾರವು ಅಲ್ಲವೇ!

**ಮಹರ್ಷಿ :–** ನಾನು ಮೊದಲೇ ಹೇಳಿದ್ದೇನೆ. ಕಳ್ಳನು ನಿನ್ನನ್ನು ಬಲವಂತ ಮಾಡಿದಾಗ ಆ ತಪ್ಪು ನಿನಗೆ ಸಂಬಂಧವಿಲ್ಲವೆಂದು ಹೇಳಿದ್ದೇನೆ. ನೀನು ಭೌತಿಕವಾಗಿ ಆತನಿಗೆ ಒಳಗಾದರೂ ಮಾನಸಿಕವಾಗಿ ನೀನು ಒಳಗಾಗಲಿಲ್ಲ, ಆದ್ದರಿಂದ ಆ ತಪ್ಪು ನಿನ್ನದಲ್ಲ. **ಎಲ್ಲಾದರೂ, ಯಾವಾಗಾದರೂ, ಮಾನಸಿಕವಾಗಿ ಏನನ್ನಾದರೂ ಒಪ್ಪಿಕೊಂಡಾಗಲೇ ಅದು ಭೌತಿಕವಾಗಿ ನಡೆದರೂ, ನಡೆಯದೆಹೋದರೂ ಅದು ನಡೆದಂತೇ ಲೆಕ್ಕಿಸಲ್ಪಡುತ್ತದೆ. ಹಾಗಲ್ಲದೆ ಏನನ್ನಾದರೂ ಮಾನಸಿಕವಾಗಿ ಒಪ್ಪಿಕೊಳ್ಳದಿದ್ದಾಗ ಅದು ನಡೆದರೂ ನಡೆಯದಂತೆ ಲೆಕ್ಕಿಸಲ್ಪಡುತ್ತದೆ.** ಈ ಸೂತ್ರವನ್ನು ತಿಳಿಸುವುದಕ್ಕೇ ದೇವರು ಭಗವಂತನಾಗಿ ಬಂದು ಭಗವದ್ಗೀತೆಯಲ್ಲಿ ಕರ್ಮಯೋಗ ಎನ್ನುವ ಧರ್ಮವನ್ನು ಬೋಧಿಸಿದ್ದಾನೆ. ಭಗವದ್ಗೀತೆ

ಕೊನೆಯಲ್ಲಿ ಮೋಕ್ಷಸನ್ಯಾಸ ಯೋಗವೆನ್ನುವ ಅಧ್ಯಾಯದಲ್ಲಿ 17ನೇ ಶ್ಲೋಕದಲ್ಲಿ ಮುಖ್ಯವಾದ ಸಾರಾಂಶವಿರುವ ಜ್ಞಾನವನ್ನು ಹೇಳಿದ್ದಾನೆ.

**ಶ್ಲೋ॥ ಯಸ್ಯ ನಾಹಂಕೃತೋ ಭಾವೊ ಬುದ್ಧಿರ್ಯಸ್ಯ ನ ಲಿಪ್ಯತೇ।**
**ಹತ್ವಾಪಿ ನ ಇಮಾನ್ ಲೋಕಾನ್ನ ಹನ್ತಿ ನನಿಬಧ್ಯತೇ ॥**

**ಭಾವಾರ್ಥ :–** ಯಾರ ಭಾವನೆಯಲ್ಲಿ ಅಹಂಕಾರವಿಲ್ಲವೋ, ಮಾಡುತ್ತಿರುವ ಕೆಲಸದ ಮೇಲೆ ಆಸಕ್ತಿಯಿಲ್ಲವೋ, ಆತನು ಈ ಲೋಕದಲ್ಲಿನವರೆಲ್ಲರನ್ನು ಸಾಯಿಸಿದರೂ ಆತನು ಹಂತಕನಲ್ಲ. ಹತ್ಯಾಪಾಪ ಅವನಿಗೆ ಅಂಟುವುದಿಲ್ಲ.

ಈ ಶ್ಲೋಕದಲ್ಲಿ ದೇವರು ಒಂದೇ ಚಿಕ್ಕ ಮಾತಿನಲ್ಲಿ ನಾವು ಹೇಳಿಕೊಂಡ ಸಾರಾಂಶವೆಲ್ಲವನ್ನು ಹೇಳಿದ್ದಾನೆ. ಭೌತಿಕವಾಗಿ ಇತರರನ್ನು ಸಾಯಿಸಿದರೂ, ಮಾನಸಿಕವಾಗಿ ಬುದ್ಧಿಯಲ್ಲಿ ಆಸಕ್ತಿಯಿಲ್ಲದೆ, ಅಹಂಕಾರ ಇಲ್ಲದೇ ಆ ಕಾರ್ಯವನ್ನು ಮಾಡಿದರೂ, ಆತನು ಆ ಕಾರ್ಯವನ್ನು ಮಾಡಿದಂತೆ ಲೆಕ್ಕಿಸಲ್ಪಡುವುದಿಲ್ಲ. ಆ ಕಾರ್ಯದಲ್ಲಿ ಬರುವ ಪಾಪ ಆತನಿಗೆ ಅಂಟುವುದಿಲ್ಲ. ಹತ್ಯೆ ಒಂದು ಭಯಂಕರವಾದ ಕ್ರೂರವಾದ ಪಾಪಕಾರ್ಯ. ಅಷ್ಟುದೊಡ್ಡ ಪಾಪಕಾರ್ಯ ನಡೆದರೂ, ಒಬ್ಬ ಮನುಷ್ಯ ಮಾಡಿದರೂ, ಆತನು ಅಹಂಕಾರವಿಲ್ಲದೇ, ಮನಸ್ಸು, ಬುದ್ಧಿಯಲ್ಲಿ ಆಸಕ್ತಿಯಿಲ್ಲದೆ ಮಾಡಿದರೆ ಆತನು ಹಂತಕನು ಅಲ್ಲ, ಹತ್ಯಾಪಾಪ ಆತನಿಗೆ ಬರುವುದಿಲ್ಲವೆಂದು ದೇವರೇ ಹೇಳಿದಾಗ, ನಿನಗೆ ಇಷ್ಟವಿಲ್ಲದೆ ನಾನು ಮಾಡಿದ್ದೇನೆನ್ನುವ ಭಾವನೆ ನಿನ್ನಲ್ಲಿ ಇಲ್ಲದಿರುವಾಗ, ಅಲ್ಲಿ ನಡೆದ ಮಾನಭಂಗದಲ್ಲಿನ ಕರ್ಮ ನಿನಗೆ ಸಂಬಂಧವಿಲ್ಲ. ನೀನು ಆ ಕೆಲಸವನ್ನು ಮಾಡಿದಂತೆ ಲೆಕ್ಕಿಸಲ್ಪಡುವುದಿಲ್ಲ. ಆದ್ದರಿಂದ ಮೊದಲೇ ನಿನ್ನ ತಪ್ಪು ಏನೂ ಇಲ್ಲವೆಂದು ಹೇಳಿದ್ದೇನೆ ಅಲ್ಲವೇ!

**ಮಹಿಳೆ :–** ಇಲ್ಲಿಯವರೆಗು ದೇವರು ಹೇಳಿದ ಈ ಜ್ಞಾನ ತಿಳಿಯದಿರುವುದರಿಂದ ನಾನು ಮಾಡದ ತಪ್ಪನ್ನು ನಾನೇ ಮಾಡಿದ್ದೇನೆಂದು ಅಂದುಕೊಂಡಿದ್ದೇನೆ. ನೀವು ಈಗ ಹೇಳಿದ ಜ್ಞಾನದಿಂದ ನನ್ನ ಅಜ್ಞಾನ ನುಚ್ಚು ನೂರಾಗಿಹೋಗಿದೆ. ಈ ಜ್ಞಾನವನ್ನು ಅನುಸರಿಸಿ ಭೌತಿಕ ಪತಿಯೊಂದಿಗೆ ಸಂಸಾರ ಮಾಡುತ್ತಿದ್ದೇನೆಂದು

ಭಾವವಿರುವವರು, ಮಾನಸಿಕವಾಗಿ ಬುದ್ಧಿಯೊಂದಿಗೆ ನಾವೇ ಮಾಡುತ್ತಿದ್ದೇವೆಂದು ಅಂದುಕೊಳ್ಳುವುದರಿಂದ, ಅವರೆಲ್ಲರೂ ನಿಜವಾದ ಗಂಡನೊಂದಿಗೆ ಅಲ್ಲದೇ ಎರಡನೇ ಗಂಡನೊಂದಿಗೆ ಸಂಬಂಧಪಟ್ಟಂತಾಗುತ್ತದೆ. ಆದ್ದರಿಂದ ಲೋಕದಲ್ಲಿ ಈ ಜ್ಞಾನ ತಿಳಿಯದವರೆಲ್ಲಾ ವ್ಯಭಿಚಾರ ಮಾಡಿದಂತೆ ಲೆಕ್ಕಿಸಲಾಗುತ್ತದೆ. ನೀವು ಈಗ ಹೇಳಿದ ಜ್ಞಾನದಿಂದ ನಾನು ಕರ್ಮದಿಂದ ಹೊರಬಿದ್ದಂತೆ, ಉಳಿದವರೆಲ್ಲರೂ ದೇವರು ಹೇಳಿದ ಜ್ಞಾನ ತಿಳಿದು ತನ್ನ ನಿಜಪತಿಯ ಮೇಲೆ ಆಸಕ್ತಿಹೊಂದಿ, ಎರಡನೆ ಪತಿಯೊಂದಿಗೆ ಆಸಕ್ತಿ ಇಲ್ಲದೇ ಸಂಸಾರ ಮಾಡಿದರೆ ಆಕೆ ವ್ಯಭಿಚಾರಿ ಅಲ್ಲ, ಸಂಸಾರಿಯಾಗುತ್ತಾಳೆ.

**ಮಹರ್ಷಿ :–** ಇಲ್ಲಿಗೆ ನೀನು ನಿಜವಾದ ಜ್ಞಾನವನ್ನು ತಿಳಿದುಕೊಂಡಿರುವುದಕ್ಕೆ ಸಂತೋಷ. ಪೂರ್ವದಲ್ಲಿ ಜ್ಞಾನ ತಿಳಿದ ಹಿರಿಯರು, ಪ್ರಜೆಗಳು ಜ್ಞಾನ ತಿಳಿದುಕೊಳ್ಳುವ ನಿಮಿತ್ತ "ಸೂಳೆ ಮಗುವಿಗೆ ತಂದೆ ಯಾರು" ಎನ್ನುವ ಗಾದೆಯನ್ನು ಹೇಳಿದ್ದಾರೆ. ದೇವರು ಹೇಳಿದ ಜ್ಞಾನವನ್ನು ತಿಳಿಯದವರೆಗು ಗಂಡಸರು, ಹೆಂಗಸರು ಎಲ್ಲರೂ ವ್ಯಭಿಚಾರಿಗಳೇ ಆಗುತ್ತಾರೆ. ತಮ್ಮ ಮಗುವಿಗೆ ನಿಜವಾದ ತಂದೆ ಯಾರೋ ತಿಳಿಯದೆ, ಇಬ್ಬರು ಪತಿಯರನ್ನು ಹೊಂದಿದವರೆಲ್ಲರೂ ವ್ಯಭಿಚಾರಿಗಳೇ ಆಗುತ್ತಾರೆ. ಅವರು ಮಾಡುತ್ತಿರುವ ಕಾರ್ಯಗಳಲ್ಲಿನ ಪಾಪ ಅವರನ್ನು ಸೇರುತ್ತಿರುತ್ತದೆ. ಯಾರ ಭಾವನೆಯಲ್ಲಿ ಅಹಂಕಾರ ಇಲ್ಲವೋ, ಯಾರ ಬುದ್ಧಿಯಲ್ಲಿ ಮಾಡುತ್ತಿರುವ ಕಾರ್ಯದಲ್ಲಿ ಆಸಕ್ತಿಯಿಲ್ಲವೋ, ಅವನು ಭೂಮಿಮೇಲೆ ಭೌತಿಕವಾಗಿ ಯಾವ ಕೆಲಸ ಮಾಡಿದರೂ ಮಾನಸಿಕವಾಗಿ ಮಾಡದಂತೇ, ಅವರಿಗೆ ಆ ಕಾರ್ಯದಲ್ಲಿನ ಫಲಿತವಾದ ಪಾಪಪುಣ್ಯಗಳಾದ ಕರ್ಮಗಳು ಅಂಟುವುದಿಲ್ಲ.

**ಮಹಿಳೆ :–** ಸ್ವಾಮಿ! ನೀವು ತಿಳಿಸಿದ ಜ್ಞಾನದಿಂದ, ಕರ್ಮಗಳಿಂದ ಸುಲಭವಾಗಿ ಹೊರಬೀಳುವುದಕ್ಕೆ ಅವಕಾಶವಿದೆ. ಇಷ್ಟು ಶ್ರೇಷ್ಠವಾದ ಜ್ಞಾನವನ್ನು ಈ ಕಾಲದಲ್ಲಿ ಯಾರೂ ಹೇಳುತ್ತಿಲ್ಲ. ಏಕೆ ಹೇಳುತ್ತಿಲ್ಲ?

**ಮಹರ್ಷಿ :–** ದೇವರು ಹೇಳಿದ ಜ್ಞಾನವನ್ನು ತಿಳಿಯುವುದಕ್ಕೆ ಯಾವ ಮನುಷ್ಯನಾದರೂ ಮೊದಲು ದೇವರ ಮೇಲೆ ಇಷ್ಟ ಹೊಂದಿರಬೇಕು. ದೇವರು

ಹೊರತು ದೊಡ್ಡವರು ಯಾರೂ ಇಲ್ಲವೆಂದು ತಿಳಿದಿರಬೇಕು. ಆಗಾದರೇನೆ ದೇವರ ಜ್ಞಾನ ಯಾರಿಗಾದರೂ ಅರ್ಥವಾಗುತ್ತದೆ. ಹಾಗೆ ಇಲ್ಲದಿರುವಾಗ ದೇವರ ಜ್ಞಾನ ತಿಳಿಯದು. ಅವರಿಗು ತಿಳಿದಿಲ್ಲ, ಆದ್ದರಿಂದ ನಿಮಗೆ ಹೇಳಲಿಲ್ಲ. ನನಗೆ 120 ವರ್ಷಗಳಿಗೆ ಜ್ಞಾನ ತಿಳಿದಿದೆ. ಉಳಿದವರಿಗೆ ಅಷ್ಟುವಯಸ್ಸಾಗಲಿ, ಅಷ್ಟು ಶ್ರದ್ಧೆಯಾಗಲಿ ಇಲ್ಲದಿರುವುದರಿಂದ ದೇವರ ಜ್ಞಾನ ತಿಳಿದಿಲ್ಲ.

## 5. ತಂದೆಯನ್ನು ಕರೆದರೆ ತಾಯಿ ಮಾತನಾಡಿದಳಂತೆ

ಈಗ ಲೋಕದಲ್ಲಿ ಕೆಲವು ಸಂದರ್ಭಗಳಲ್ಲಿ ಹೇಳಿಕೊಳ್ಳುವ ಮತ್ತೊಂದು ಗಾದೆಯನ್ನು ಹೇಳಿಕೊಳ್ಳೋಣ. ಪ್ರಪಂಚದಲ್ಲಿ ಎಷ್ಟೋಜನ ಎಷ್ಟೋ ಕೆಲಸಗಳನ್ನು ಮಾಡುತ್ತಿರುತ್ತಾರೆ. ಒಂದೊಂದುಸಲ ಒಂದು ಕೆಲಸವನ್ನು ಮಾಡಿದರೆ ಆ ಕೆಲಸ ನಡೆಯುವುದಿಲ್ಲ ಆದರೆ, ಮತ್ತೊಂದು ಕೆಲಸ ನಡೆಯುತ್ತದೆ. ಒಬ್ಬ ವ್ಯಕ್ತಿ ಸೊಂಟಕ್ಕಿರುವ ಉಡುದಾರ ಭಾವಿಯಲ್ಲಿ ಬಿದ್ದಿದೆಯೆಂದು ತನ್ನ ಉಡುದಾರಕ್ಕೆಂದು ಬಾವಿಯಲ್ಲಿನ ನೀರಿನಲ್ಲಿ ಮುಳುಗಿದರೆ ಉಡುದಾರ ದೊರೆಯಲಿಲ್ಲ ಆದರೆ, ಒಂದು ಬಂಗಾರದ ಬಿಂದಿಗೆ ದೊರೆತಿದೆಯಂತೆ. ಆ ಮನುಷ್ಯ ಒಂದು ಕೆಲಸದ ಸಲುವಾಗಿ ಬಾವಿಯೊಳಗೆ ಇಳಿದರೆ, ತನ್ನ ಕೆಲಸ ನಡೆಯದೆ ಹೋಗುವುದೇ ಅಲ್ಲದೇ ತಾನು ಊಹಿಸದ ಬಂಗಾರ ದೊರಿತಿದೆ. ಅಂತಹ ಸಂದರ್ಭದಲ್ಲಿ "ತಂದೆಯನ್ನು ಕರೆದರೆ ತಾಯಿ ಮಾತನಾಡಿದಳಂತೆ" ಎಂದು ಕೆಲವರು ಆ ಕೆಲಸಕ್ಕೆ ತಕ್ಕಂತೆ ಹೇಳುತ್ತಿದ್ದರು. ಪ್ರಪಂಚದಲ್ಲಿ ಮನುಷ್ಯರು ಮಾತನಾಡಿಕೊಳ್ಳುವ ಭಾಷೆಯಲ್ಲಿ ಗಾದೆಯನ್ನು ಜೋಡಿಸುವುದರಲ್ಲಿ ಪ್ರಜೆಗಳಿಗೆ ದೈವಜ್ಞಾನ ತಿಳಿಯಬೇಕೆನ್ನುವ ಉದ್ದೇಶ ಹೊರತು ಮತ್ತೇನು ಇಲ್ಲ. ಯಾವ ಅರ್ಥದಿಂದ "ತಂದೆಯನ್ನು ಕರೆದರೆ ಅಮ್ಮ ಮಾತನಾಡಿದಳಂತೆ" ಎಂಬ ಮಾತನ್ನು ಇಟ್ಟಿದ್ದಾರೊ ವಿವರಿಸಿಕೊಂಡು ನೋಡೋಣ.

ಪ್ರಪಂಚದಲ್ಲಿ ಪತಿ ಸತಿಗಳಾದವರು ಇಬ್ಬರೂ ಒಂದು ಮಗುವಿಗೆ ತಾಯಿ ತಂದೆಯಾಗಿ ಇದ್ದಾರೆ. ಪತಿ ತಂದೆಯಾಗಿ, ಸತಿ ತಾಯಿಯಾಗಿ

ಇದ್ದಾಳೆಂದು ಯಾವ ಪುತ್ರನಾದರೂ, ಯಾವ ಪುತ್ರಿಯಾದರೂ ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ಒಬ್ಬ ಮಗ, ಒಬ್ಬ ಮಗಳಿಗೆ ಒಬ್ಬ ಪತಿ ಸತಿ ತಂದೆ ತಾಯಿಯರಾಗಿ ಇರುವಂತೆ, ಪ್ರಪಂಚದಲ್ಲಿನ ಮನುಷ್ಯರೆಲ್ಲರಿಗೂ ಸೇರಿ ಒಬ್ಬ ತಂದೆ, ಒಬ್ಬ ತಾಯಿ ಇದ್ದಾರೆ. ಅವರನ್ನೇ ಆದಿ ದಂಪತಿಗಳೆನ್ನುತ್ತಾರೆ. ಇನ್ನೂ ಅವರನ್ನೇ ಪರಮಾತ್ಮ, ಪ್ರಕೃತಿ ಎಂದು ಕೂಡಾ ಹೇಳಬಹುದು. ಎಲ್ಲರಿಗೂ ತಂದೆ ಪರಮಾತ್ಮ ಆದ್ದರಿಂದ ಆತನನ್ನು ಸೃಷ್ಠಿಕರ್ತ ಎಂದು ಕೂಡಾ ಹೇಳುತ್ತಾರೆ. ಭೂಮಿಮೇಲೆ ಕೆಲವರು ದೇವರನ್ನು ತಿಳಿಯಬೇಕೆಂದು ಪ್ರಯತ್ನ ಮಾಡುತ್ತಿರುತ್ತಾರೆ. ಅಂತಹವರು ತಪ್ಪುದಾರಿ ಹಿಡಿದು ಹೋಗುವಂತೆ ಮಾಯೆ ಮಾಡುತ್ತಿದೆ. ಮಾಯೆ ಎಂದರೆ ಏನೆಂದು ವಿವರಿಸಿಕೊಂಡು ನೋಡಿದರೆ, ಎಲ್ಲರಿಗೂ ತಾಯಿಯಾದ ಪ್ರಕೃತಿಯೇ ಮಾಯೆ ಎನ್ನುವ ಹೆಸರು ಹೊಂದಿದೆಯೆಂದು ತಿಳಿಯಬೇಕು. ಕಾಣಿಸುವ ಪ್ರಕೃತಿಯೇ ಕಾಣಿಸದ ಮಾಯೆಯಾಗಿದೆ. ಹೊರಗೆ ಕಾಣಿಸುವ ಪಂಚಭೂತಗಳ ರೂಪದಲ್ಲಿರುವ ಪ್ರಕೃತಿ, ಶರೀರದೊಳಗೆ ಕಾಣಿಸದ ಗುಣಗಳ ರೂಪದಲ್ಲಿ ಮಾಯೆ ಎನ್ನುವ ಹೆಸರು ಹೊಂದಿದೆ. ಹೊರಗೆ ಪ್ರಕೃತಿಯನ್ನಾಗಲಿ, ಒಳಗೆ ಮಾಯೆಯನ್ನಾಗಲಿ ದೇವರೇ ತಯಾರುಮಾಡಿಟ್ಟಿದ್ದಾನೆ. ಮನುಷ್ಯರು ಯಾರಾದರೂ ದೇವರನ್ನು ತಿಳಿಯಬೇಕೆಂದಾಗಲಿ, ದೇವರ ಹತ್ತಿರಕ್ಕೆ ಬರಬೇಕೆಂದಾಗಲಿ ಪ್ರಯತ್ನಮಾಡಿದರೆ, ಅವನು ಎಂತಹವನೊ ತಿಳಿದ ದೇವರು, ಅವನು ಆತನಿಗೆ ಇಷ್ಟವಾದವನು ಅಲ್ಲದಿದ್ದರೆ ಅವನನ್ನು ತನ್ನ ಹತ್ತಿರಕ್ಕೆ ಬರದಂತೆ ಮಾಡುವುದಕ್ಕೆ ತನ್ನ ಮಾಯೆಗೆ ಹೇಳುತ್ತಾನೆ. ಆಗ ಮಾಯೆ ತಾನೇ ದೇವರಾಗಿ ಕಾಣಿಸಿ ತನ್ನ ಕಡೆ ಸೆಳೆದುಕೊಳ್ಳುತ್ತದೆ. ಆ ವಿಧವಾಗಿ ಮಾಯೆಯನ್ನೇ ದೇವರಾಗಿ ಗ್ರಹಿಸಿದ ಮನುಷ್ಯ, ಅಸಲು ದೇವರನ್ನು ಮರೆತುಹೋಗಿ ತನಗೆ ತಿಳಿದಿರುವುದೇ ದೇವರೆಂದುಕೊಳ್ಳುತ್ತಾನೆ. ದೇವರಿಗೆ ಇಷ್ಟವಾದವನು ಎಂತಹವನನ್ನಾದರೂ, ಆತನ ಸತಿಯಾದ ಮಾಯೆ ತನ್ನ ಬಲೆಯಿಂದ ಹೊರಬೀಳದಂತೆ ಮಾಡಿ, ದೇವರಕಡೆ ಹೋಗದಂತೆ ಮಾಡುತ್ತದೆ. ಈ ವಿಧವಾಗಿ ದೇವರು ಮಾಯೆಯನ್ನು ಅಡ್ಡ ಇಟ್ಟುಕೊಂಡು ಎಲ್ಲರನ್ನು ತನ್ನ ಕಡೆ ಬರದಂತೆ ಮಾಡಿಕೊಂಡಿದ್ದಾನೆ. ಆದ್ದರಿಂದ ವೇಮನಯೋಗಿ ತನ್ನ ಪದ್ಯದಲ್ಲಿ ಹೀಗೆ ಹೇಳಿದ್ದಾನೆ.

**ಪತಿ ಒಪ್ಪಿದರೆ ಸತಿ ಒಪ್ಪುವಳು**
**ಪತಿ ಸತಿಗಳು ಒಂದಾದರೆ ಪರಮ ಪಾವನದಲ್ಲಿ**
**ಪತಿ ಸತಿ ನ್ಯಾಯವೇ ಮೋಕ್ಷ**
**ಬದುಲಿತ ಪರಮಾತ್ಮನೈಕ್ಯವಾಗೋ ವೇಮಾ.**

ಈ ಪದ್ಯದಲ್ಲಿ ಕೂಡಾ ವೇಮನಯೋಗಿ, ಪತಿಯೊಪ್ಪಿದರೆ ಸತಿ ಒಪ್ಪುತ್ತಾಳೆ ಎಂದಿದ್ದಾನೆ. ದೇವರಿಗೆ ಇಷ್ಟವಾದಾಗಲೇ ಸತಿಯಾದ ಮಾಯೆ ಜೀವಿಯನ್ನು ತನ್ನ ಕೈಯಿಂದ ಬಿಡುತ್ತಾಳೆ. ಆತನಿಗೆ ಇಷ್ಟವಿಲ್ಲದ್ದು ಯಾರು ಕೂಡಾ ಆತನಕಡೆ ಹೋಗಲಾರನು. ಆತನಿಗೆ ಇಷ್ಟವಿಲ್ಲದವನನ್ನು ಮಾಯೆ ಮುಂದಕ್ಕೆ ಕಳಿಸುವುದಿಲ್ಲ. ಇಷ್ಟು ಪ್ರಪಂಚದಲ್ಲಿ ದೇವರು ಅಲ್ಲದಿರುವುದನ್ನು ದೇವರೆಂದು ನಂಬಿಸಿ, ಆಕಡೆ ಹೋಗುವಂತೆ ಮಾಡುತ್ತದೆ. ಆದರೆ ದೇವರಕಡೆ ಹೋಗಲು ಬಿಡುವುದಿಲ್ಲ. ಆದ್ದರಿಂದ ಭಗವದ್ಗೀತೆಯಲ್ಲಿ ಕೂಡಾ "ದೈವಿಹ್ಯೇಷಾ ಗುಣಮಯಿ ಮಮ ಮಯಾ ದುರತ್ಯಯಾ" ಎಂದು ಹೇಳಿದ್ದಾನೆ. ದೇವರು ಸೃಷ್ಟಿಸಿದ ಗುಣಮಯ ವಾದ ಮಾಯೆಯನ್ನು ಜಯಿಸುವುದು ದುಸ್ಸಾಧ್ಯ ಎಂದು ಹೇಳಿದ್ದಾನೆ. ಇದೆಲ್ಲವೂ ಯಾರಾದರೂ ದೇವರನ್ನು ತಿಳಿದುಕೊಳ್ಳಬೇಕೆಂದುಕೊಂಡಾಗ ನಡೆಯುವ ವಿಧಾನ. ಆದ್ದರಿಂದ "ತಂದೆಯನ್ನು ಕರೆದರೆ ತಾಯಿ ಮಾತನಾಡಿದಳಂತೆ" ಎಂದು ಹೇಳುವುದು ನಡೆದಿದೆ. ತಂದೆಯಾದ ದೇವರ ಹತ್ತಿರಕ್ಕೆ ಹೋಗಬೇಕೆಂದು ಕೊಂಡವನನ್ನು, ಮೊದಲು ತಾಯಿಯಾದ ಮಾಯೆ ಪರೀಕ್ಷಿಸಿ, ಅವನು ಕಪಟ ಪ್ರೇಮವನ್ನು ತಂದೆಮೇಲೆ ತೋರಿಸುತ್ತಾ ನಟಿಸುವವನಾದರೆ ಯಾವ ಕಾರಣಕ್ಕು ತನ್ನ ಪತಿಯ ಹತ್ತಿರಕ್ಕೆ ಹೋಗಲು ಬಿಡುವುದಿಲ್ಲ. ಆದ್ದರಿಂದ ದೇವರನ್ನು ಕುರಿತು ತಿಳಿದರೇ ಮೊದಲು ಮಾಯೆ ಕೆಲಸ ಮಾಡುತ್ತದೆ. ಅದನ್ನು ತಿಳಿಸುವುದಕ್ಕೆ "ತಂದೆಯನ್ನು ಕರೆದರೆ ತಾಯಿ ಮಾತನಾಡಿದಳಂತೆ" ಎಂದು ಹಿರಿಯರಂದಿದ್ದಾರೆ.

ಹೊರಗೆ ಮನುಷ್ಯರನ್ನು ಮೋಸ ಮಾಡಿದಂತೆ ಯಾರೆ ಆಗಲಿ ದೇವರನ್ನು ಮೋಸ ಮಾಡುವುದಕ್ಕೆ ಸಾಧ್ಯವಿಲ್ಲ. ನಿಜವಾದ ಭಕ್ತಿ ಇಲ್ಲದಿದ್ದರೂ ನೀನು ಹೊರತು ಬೇರೆ ದೇವರು ಇಲ್ಲವೆನ್ನುವವರು ಕೆಲವರು ಇದ್ದಾರೆ. ಅವರು ಹಾಗೆ ದೇವರನ್ನು ಹೊಗಳುವುದರ ಹಿಂದೆ ನಿಜವಾದ ಭಕ್ತಿ ಇರುವುದಿಲ್ಲ.

ಅವನ ಹೊಗಳಿಕೆ ಹಿಂದೆ ಏನೋ ಆಕಾಂಕ್ಷೆ ಇರುತ್ತದೆ. ಪ್ರಪಂಚ ಕೋರಿಕೆ ಇಲ್ಲದಂತೆ ದೇವರೇ ಎಂದು ಯಾರೂ ಅನ್ನುತ್ತಿಲ್ಲ. ನಮ್ಮ ದೇವರನ್ನು ಮೀರಿದ ದೇವರು ಇಲ್ಲ, ನಮ್ಮ ದೇವರೇ ನಿಜವಾದ ದೇವರು ಎನ್ನುವುದರಲ್ಲಿಯೇ ಆತನ ಆಂತರ್ಯ ಹೊರಬೀಳುತ್ತಿದೆ. ಪ್ರಪಂಚಕ್ಕೆಲ್ಲ ಒಬ್ಬನೇ ದೇವರು ಆದಾಗ, ನಿಮ್ಮ ದೇವರಿಗಿಂತ ನಮ್ಮ ದೇವರು ಶ್ರೇಷ್ಠವಾದವನು ಎನ್ನುವುದರಲ್ಲಿ ದೇವರನ್ನು ಕುರಿತು ಪೂರ್ತಿ ತಿಳಿಯದೇ, ಆತನ ಶಕ್ತಿಯನ್ನು ಅರ್ಥ ಮಾಡಿಕೊಳ್ಳದೆ ದೇವರನ್ನೇ ಯಾಮಾರಿಸುವ ಮಾತುಗಳಿಂದ ಹೊಗಳುವವರಿದ್ದಾರೆ. ಎಲ್ಲರ ಆಂತರ್ಯ ತಿಳಿದ ದೇವರು, ಯಾರು ತನಗೆ ನಿಜವಾದ ಭಕ್ತನೊ ಯಾರು ಅಲ್ಲವೋ ತಿಳಿಯುವುದರಿಂದ, ಆತನಿಗೆ ಇಷ್ಟವಾದವನನ್ನೇ ತನ್ನ ಹತ್ತಿರಕ್ಕೆ ಬರುವಂತೆ ಮಾಡುತ್ತಾನೆ. ಆತನಿಗೆ ಇಷ್ಟವಿಲ್ಲದವನನ್ನು, ಆತನ ಸತಿಯಾದ ಮಾಯೆ ಅವನನ್ನು ದೇವರಕಡೆ ಬರದಂತೆ ಮಾಡಬಲ್ಲದು. ದೇವರಿಗೆ ಇಷ್ಟ ಇಲ್ಲವಿಲ್ಲದಿರುವಾಗ ಮಾಯೆ ಯಾರನ್ನು ತನ್ನ ಬಂಧದಿಂದ ಬಿಡದೆ ಹಿಡಿದುಕೊಳ್ಳುತ್ತದೆ. ಆದ್ದರಿಂದ ದೇವರೇ ಎಂದರೆ ಮೊದಲು ನನ್ನನ್ನು ದಾಟಿಹೋಗಿ ಎನ್ನುತ್ತದೆ ಮಾಯೆ. ಆ ವಿಷಯವನ್ನೇ "ತಂದೆಯನ್ನು ಕರೆದರೆ ತಾಯಿ ಮಾತನಾಡಿದ್ದಾಳೆ" ಎಂದು ಸೂಕ್ಷ್ಮವಾಗಿ ಹಿರಿಯರು ಹೇಳಿದ್ದಾರೆ.

## 6. ಅರ್ಥವಿಲ್ಲದ ಜೀವನ ವ್ಯರ್ಥ

"ಅರ್ಥವಿಲ್ಲದ ಜೀವನ ವ್ಯರ್ಥ" ಎನ್ನುವ ಗಾದೆಯನ್ನು ಕೆಲವರು ಸೋಂಬೇರಿಗಳ ಬಗ್ಗೆ ಬಳಸುತ್ತಿರುತ್ತಾರೆ. ಜೀವನಕ್ಕೆ ಒಂದು ಆಶಯ ಇಲ್ಲದಂತೆ, ತಮ್ಮ ಬದುಕು ಪಶುಗಳಂತೆ ಬದುಕುವುದು ಹೊರತು, ಯಾವ ಸಾರ್ಥಕ ಇಲ್ಲದಂತೆ ಜೀವನವನ್ನು ಕಳೆಯುವವರನ್ನು ನೋಡಿ, ಕೆಲವರು ಹಿರಿಯರು ಅವರನ್ನು ಉದ್ದೇಶಿಸಿ "ಅರ್ಥವಿಲ್ಲದ ಜೀವನ ವ್ಯರ್ಥ" ಎಂದು ಹೇಳುವುದು ಅಲ್ಲಲ್ಲಿ ನೋಡಿದ್ದೇವೆ. ಕೆಲವು ಮಾತುಗಳು ಯಾವ ಸಂದರ್ಭದಲ್ಲಿ ಬಳಸಿದರೂ, ಅವುಗಳನ್ನು ಯೋಚಿಸಿ ನೋಡಿದರೆ ಎಷ್ಟೋ ದೊಡ್ಡ ದೈವಜ್ಞಾನ ಸಂದೇಶವನ್ನು ಕೊಡುವವಾಗಿ ಇರುತ್ತವೆ. ಈಗ ಈ ಗಾದೆಯಲ್ಲಿನ ಭಾವನೆಯನ್ನು ವಿವರಿಸಿಕೊಂಡರೆ ಹೀಗೆ ಇದೆ. ಪ್ರಪಂಚದಲ್ಲಿ ಜೀವ ಇರುವವುಗಳಿಗಾಗಲಿ

ಜೀವ ಇಲ್ಲದವುಗಳಿಗಾಗಲಿ ಸ್ಥೂಲ, ಸೂಕ್ಷ್ಮ ಎರಡೂ ಇರುತ್ತವೆ. ಸ್ಥೂಲ ಎಂದರೇ ಕಣ್ಣಿಗೆ ಕಾಣಿಸುವುದೆಂದು, ಸೂಕ್ಷ್ಮ ಎಂದರೇ ಕಣ್ಣಿಗೆ ಕಾಣಿಸದಿರುವು ದೆಂದು ಅರ್ಥ. ಜೀವವಿರುವ ಒಂದು ನಾಯಿಯನ್ನು ತೆಗೆದುಕೊಂಡು ನೋಡಿದರೆ, ಅದಕ್ಕೆ ಭೌತಿಕ, ಅಭೌತಿಕ ಎನ್ನುವವು ಎರಡು ಇವೆ. ಭೌತಿಕ ಎಂದರೇ ದೃಷ್ಠಿಗೆ ತಿಳಿಯುವ ಸ್ಥೂಲ ಶರೀರ, ಅಭೌತಿಕ ಎಂದರೇ ಕಣ್ಣಿಗೆ ಕಾಣಿಸದ ಸೂಕ್ಷ್ಮ ಶರೀರ ಎರಡೂ ಇವೆ. ಹಾಗೇ ಒಂದು ಜೀವವಿಲ್ಲದ ಒಂದು ವಸ್ತ್ರವನ್ನಾಗಲಿ, ಆಹಾರ ಪದಾರ್ಥವನ್ನಾಗಲಿ ತೆಗೆದುಕೊಳ್ಳೋಣ. ಅವುಗಳಲ್ಲಿ ಕೂಡಾ ಸ್ಥೂಲ ಸೂಕ್ಷ್ಮಗಳೆರಡೂ ಇವೆ. ಉದಾಹರಣೆಗೆ:– ಹಿರಿಯರ ಹಬ್ಬದ ದಿನ ಪಿತ್ರರ (ಹಿರಿಯರ) ಪೂಜೆಗಳಲ್ಲಿ ಹೊಸಬಟ್ಟೆಗಳನ್ನು ಧರಿಸಿ ಪಾಯಸವನ್ನು, ಆಹಾರ ಪದಾರ್ಥವನ್ನು ಒಂದು ಪಾತ್ರೆಯಲ್ಲಿ ಇರಿಸಿದ್ದಾರೆ. ಆ ಪಾಯಸ, ಅಲ್ಲಿಟ್ಟಿರುವ ಬಟ್ಟೆಗಳು ಎಲ್ಲಾ ತಮ್ಮ ಹಿರಿಯರಿಗೆಂದು ಇಟ್ಟಿದ್ದಾರೆ. ಕೆಲವು ದಿನಗಳು ಕಳೆದುಹೋದ ನಂತರ, ಆ ಮನೆಯಲ್ಲಿ ಮರಣಿಸಿದ ಅವರ ಹಿರಿಯರು ಒಬ್ಬ ಮನುಷ್ಯನ ಮೈಮೇಲೆ ಬಂದು ಹೀಗೆ ಮಾತನಾಡಿದ್ದಾರೆ.

**ಹಿರಿಯರು :–** ಏನೋ, ಆಸ್ತಿಯೆಲ್ಲವನ್ನು ನಾನೇ ಕಷ್ಟಪಟ್ಟು ಸಂಪಾದಿಸಿ ನಿನಗೆ ಕೊಟ್ಟುಹೋಗಿದ್ದೇನೆ. ನೀವೆಲ್ಲರೂ ಚೆನ್ನಾಗಿಯೇ ಬದುಕುತ್ತಿದ್ದೀರ. ವರ್ಷ ಕ್ಕೊಂದುಸಲ ನನಗೆ ಬಟ್ಟೆಗಳನ್ನಿಟ್ಟರೆ ಅವೂ ಕೂಡಾ ಬಹಳ ಕಡಿಮೆ ರೇಟಿನವು ತಂದಿಟ್ಟಿದ್ದಾರೆ. ನಾನು ಬದುಕಿರುವಾಗ ಯಾವಾಗಾದರೂ ಅಷ್ಟು ಕಡಿಮೆರೇಟಿನ ಪಂಚೆಯನ್ನು ಕಟ್ಟಿದ್ದೇನಾ? ನನ್ನ ಸ್ವತ್ತನ್ನು ನನಗೆ ಇಡುವುದಕ್ಕೆ ನಿಮಗೆ ಮನಸ್ಸು ಬರಲಿಲ್ಲವಾ?

**ಮಕ್ಕಳು :–** ನೀನು ಸತ್ತುಹೋಗಿದ್ದೀಯಾ ಅಲ್ಲವೇ! ನಿನಗೇಕೆ ಬಟ್ಟೆಗಳು? ಹಿರಿಯರ ಹಬ್ಬವೆಂದು ಎಲ್ಲರೂ ಇಟ್ಟಂತೆ ಇಟ್ಟಿದ್ದೇವೆ. ನಾವು ಪಂಚೆಗಳು ಉಡುವುದಿಲ್ಲವಲ್ಲ! ಖರೀದಾದವುಗಳನ್ನು ತಂದರೂ ವ್ಯರ್ಥವಾಗಿರುತ್ತವೆಂದು ಕಡಿಮೆ ರೇಟಿನವು ತಂದಿದ್ದೇವೆ.

**ಹಿರಿಯರು :–** ಒಂದುವೇಳೆ ಹಿರಿಯರ ಹಬ್ಬ ಬಾರದೆಹೋದರೆ ಬಟ್ಟೆಗಳು ಕೂಡಾ ಇಡುವವರಲ್ಲ. ಸತ್ತುಹೋಗಿದ್ದೀಯಾ ನಿನಗೇತಕ್ಕೆ ಬಟ್ಟೆಗಳನ್ನುತ್ತೀಯಲ್ಲೋ!

ಸತ್ತುಹೋದವರು ಎಷ್ಟೋಜನ ಇದ್ದಾರೆ. ಅವರೆಲ್ಲರೂ ಬಟ್ಟೆಗಳು ಕಟ್ಟಿಕೊಳ್ಳುತ್ತಿದ್ದಾರಲ್ಲೋ! ನಿಮ್ಮ ಲೆಕ್ಕದಲ್ಲಿ ನಾವು ಸತ್ತುಹೋದರೂ, ನಮ್ಮ ಲೆಕ್ಕದಲ್ಲಿ ನಾವು ಮತ್ತೊಂದುಸಲ ಮರಣಿಸಬೇಕು. ಅಲ್ಲಿಯವರೆಗು ನಿಮ್ಮಂತೆ ತಿಂಡಿ ತಿನ್ನಬೇಕಾಗಿರುವುದೇ, ಬಟ್ಟೆಗಳು ಕಟ್ಟಬೇಕಾಗಿದ್ದೇ. ನನಗಿಂತ ಆರು ತಿಂಗಳ ಮುಂಚೆಯೇ ಪಕ್ಕದ ಮನೆಯ ರಂಗಾರೆಡ್ಡಿ ಮರಣಿಸಿದ್ದಾನಲ್ಲಾ! ರಂಗಾರೆಡ್ಡಿ ದೊಡ್ಡದಾಗಿ ಆಸ್ತಿಯನ್ನು ಸಂಪಾದಿಸದಿದ್ದರೂ, ಆತನ ಮಕ್ಕಳು ರಂಗಾರೆಡ್ಡಿಗೆ ಒಳ್ಳೆಯ ಬಟ್ಟೆಗಳಿಟ್ಟಿದ್ದಾರೆ. ನನಗಿಂತ ಬಡವನಾದರೂ, ನನಗಿಂತ ಧನಿಕನಂತೆ ಒಳ್ಳೆಯ ಬಟ್ಟೆಗಳು ಕಟ್ಟಿಕೊಳ್ಳುತ್ತಿದ್ದರೇ, ಅವನ ಮುಂದೆ ನಾನು ನೀವು ಇಟ್ಟಿರುವ ಕಡಿಮೆ ರೇಟಿನ ಬಟ್ಟೆಗಳು ಕಟ್ಟಿಕೊಳ್ಳುವುದಕ್ಕೆ ನಾಚಿಕೆಯಾಗುತ್ತಿದೆ. ನೀವು ಕಟ್ಟಿಕೊಳ್ಳುವುದಕ್ಕೆ ಕೆಲಸಕ್ಕೆ ಬರುವುದಿಲ್ಲವೆಂದು ಕಡಿಮೆ ರೇಟಿನವು ತಂದಿದ್ದೇವೆನ್ನುತ್ತಿದ್ದಾರೆ. ನೀವು ಬಟ್ಟೆಗಳು ತಂದಿರುವುದು ನೀನು ಕಟ್ಟಿಕೊಳ್ಳುವುದಕ್ಕಾ, ನಾನು ಕಟ್ಟಿಕೊಳ್ಳುವುದಕ್ಕಾ.?

**ಮಕ್ಕಳು :–** ಬದುಕಿದ್ದರೇ ಎಷ್ಟು ಖರೀದಾದರೂ ಇಡುತ್ತಿದ್ದೆವು ಸತ್ತುಹೋದವರಿಗೆ ಹೆಸರಿಗೆ ಇಡುವವೇ ಹೊರತು, ನೀವೇನಾದರೂ ಕಟ್ಟಿಕೊಳ್ಳುತ್ತೀರಾ?

**ಹಿರಿಯರು :–** ಎಲೈ! ನಾನು ಪೂರ್ತಿಯಾಗಿ ಮರಣಿಸಲಿಲ್ಲ ಕಣೋ, ನೀವು ನೋಡುವುದಕ್ಕೆ ಮಾತ್ರವೇ ಮರಣಿಸಿದ್ದೇನೆ. ನಾನು ಇನ್ನೂ ಬದುಕೇ ಇದ್ದೇನೆ. ನಾನು ನಿಮಗೆ ಕಾಣಿಸದಂತೆ ಇನ್ನೂ ಸ್ವಲ್ಪಕಾಲವಿದ್ದು, ನನಗೆ ಪೂರ್ತಿಯಾಗಿ ಮರಣ ಬಂದಾಗ ಸತ್ತುಹೋಗುತ್ತೇನೆ. ಅಲ್ಲಿಯವರೆಗು ನಾನು ನಿಮ್ಮ ಲೆಕ್ಕದಲ್ಲಿ ಮರಣಿಸಿದರೂ, ನನ್ನ ಲೆಕ್ಕದಲ್ಲಿ ನಾನು ಬದುಕಿದ್ದೇನೆ. ನನಗೂ ನಿಮಗೆ ಬೇಕಾದಹಾಗೆ ತಿಂಡಿ, ಬಟ್ಟೆ ಬೇಕು...

ಈಗ ವಿಷಯದೊಳಗೆ ಬರೋಣ. ಇದೆಲ್ಲವೂ ನೀವು ಓದುತ್ತಾ ಇದ್ದರೆ ಇದೇನು ವಿಚಿತ್ರ, ಈ ಕಾಲದಲ್ಲಿ ಕೂಡಾ ಕಲ್ಲಿನಯುಗದಲ್ಲಿನ ಹಳೆಮಾತುಗಳು ಹೇಳುತ್ತಿದ್ದಾರೆಂದು ಅಂದುಕೊಳ್ಳಬೇಡಿ. ನಾವು ಹೇಳುತ್ತಿರುವುದು ಪೂರ್ತಿ ಸತ್ಯ. ಈ ದಿನ ಮನುಷ್ಯನಿಗೆ ತಿಳುವಳಿಕೆ ಹೆಚ್ಚಾಗಿ, ಪರಿಮಿತಿ ಮೀರಿಹೋಗಿ, ಕೆಲವು ವಿಷಯಗಳಲ್ಲಿ ಕೆಲಸ ಮಾಡುವುದು ಬಿಡುವುದರಿಂದ ಸ್ಥೂಲ ವಿಷಯಗಳು

ಹೊರತು, ಸೂಕ್ಷ್ಮ ವಿಷಯಗಳನ್ನು ಬುದ್ಧಿ ಗ್ರಹಿಸಲಾರದೆ ಹೋಗಿದೆ. ಕೊನೆಗೆ ನಮ್ಮ ಸಾವು ಎಷ್ಟು ವಿಧಗಳು ಇದೆಯೆಂದು ಕೂಡಾ ತಿಳಿಯದೇ ಹೋಗಿದೆ. ಮೂರು ವಿಧಗಳ ಮರಣಗಳಲ್ಲಿ ತಾತ್ಕಾಲಿಕ ಮರಣವನ್ನು ಹೊಂದಿದ ಯೇಸು ಪ್ರಭುವು ಪುನಃ ಎದ್ದರೆ, ಅದರ ವಿಧಾನ ಅಷ್ಟೇಯೆಂದು ತಿಳಿಯದೆ, ಒಂದುಕಡೆ ನಾನು ಮರಣಿಸಲಿಲ್ಲ ಎಂದು ಆತನೇ ಹೇಳುತ್ತಿದ್ದರೂ ಅದನ್ನು ಕೂಡಾ ಹಿಡಿಸಿಕೊಳ್ಳದೆ, ತಮಗೆ ತಿಳಿದಿರುವುದೇ ಸತ್ಯವೆಂದುಕೊಂಡು, ನಮ್ಮ ದೇವರು ಮರಣಿಸಿ ಪುನಃ ಎದ್ದಿದ್ದಾನೆಂದು ಹೇಳಿಕೊಳ್ಳುತ್ತಿದ್ದಾರೆ. ಮರಣದಲ್ಲಿ 1) ಅಕಾಲ ಮರಣ 2) ತಾತ್ಕಾಲಿಕ ಮರಣ 3) ಕಾಲ ಮರಣ ಎಂದು ಮೂರು ಮರಣಗಳು ಇವೆಯೆಂದು ಯಾರಿಗೂ ತಿಳಿಯದೇ ಹೋಗಿದೆ.

ಮನುಷ್ಯ ಭೌತಿಕ ಶರೀರದಲ್ಲಿ ಭೌತಿಕವಲ್ಲದ ಮತ್ತೊಂದು ಶರೀರವಿದೆಯೆಂದು ಯಾರಿಗೂ ತಿಳಿಯದೇ ಹೋಗಿರುವುದರಿಂದ, ಸ್ಥೂಲ, ಸೂಕ್ಷ್ಮಗಳ ಅರ್ಥವೇ ತಿಳಿಯದಂತೆ ಹೋಗಿದೆ. ಪ್ರಾಣವಿರುವ ಶರೀರಕ್ಕೇ ಅಲ್ಲದೇ, ಪ್ರಾಣವಿಲ್ಲದ ಪ್ರತಿ ವಸ್ತುವಿಗೂ ಕೂಡಾ ಸ್ಥೂಲವಲ್ಲದೆ ಸೂಕ್ಷ್ಮವು ಕೂಡಾ ಇದೆಯೆಂದು ಯಾರಿಗೂ ತಿಳಿಯದೇ ಹೋಗಿದೆ. ಗಿಡ ಕೊಂಬೆ ಗಳಾದರೂ, ಮನುಷ್ಯ ಶರೀರ ಭಾಗಗಳಾಗಲಿ, ವಸ್ತ್ರದಲ್ಲಿನ ನೂಲಿನ ಎಳೆಯಾಗಲಿ, ಎಣ್ಣೆಯಲ್ಲಿರುವ ದ್ರವವಾಗಲಿ, ಏನಾದರೂ ಒಂದು ಪದಾರ್ಥದಿಂದಲೇ ತಯಾರಾಗಿರುತ್ತದೆ. ಪದಾರ್ಥವನ್ನು ಬಿಡಿಸಿ ನೋಡಿದರೆ, ಯಾವ ವಸ್ತುವಿನಲ್ಲಾದರೂ ಪದ ಒಂದು, ಅರ್ಥ ಮತ್ತೊಂದು ಇರುತ್ತದೆ. ಪದ+ಅರ್ಥ= ಪದಾರ್ಥ. ಒಂದು ವಸ್ತು ಸ್ಥೂಲವಾಗಿ ನಾಶವಾದಾಗ ಅದರಲ್ಲಿನ ಪದವು ನಶಿಸುತ್ತಿದೆ. ಅರ್ಥವು ಹಾಗೆಯೇ ಉಳಿದುಹೋಗುತ್ತಿದೆ. ಒಂದು ವಸ್ತ್ರವನ್ನು ಸುಟ್ಟಾಗ, ಅದು ಅಗ್ನಿಯಲ್ಲಿ ಸ್ಥೂಲವಾಗಿ ಸುಟ್ಟು ಬೂದಿಯಾದರೂ, ಸೂಕ್ಷ್ಮವಾಗಿ ಉಳಿದಿದೆ. ಸುಟ್ಟ ಸ್ಥೂಲವು "ಪದ" ವಾದರೆ, ಸುಟ್ಟುಹೋದ ನಂತರ ಕೂಡಾ ಕಾಣಿಸದೇ, ಉಳಿದಿರುವ ವಸ್ತ್ರವು ಅದರಲ್ಲಿನ "ಅರ್ಥವು". ಕೊನೆಗೆ ನಿಮಗೆ ಅರ್ಥವಾಗುವುದಕ್ಕೆ ನಾವು ಹೇಳುತ್ತಿರುವ ಸತ್ಯ ಏನೆಂದರೇ! ಅಣುವು ಕೂಡಾ ಪದಾರ್ಥದಿಂದಲೇ ತಯಾರಾಗಿದೆ. ಪರಿಮಾಣದಲ್ಲಿ ಕೂಡಾ ಪದವು ಇದೆ,

ಅರ್ಥವಿದೆ. ಆದ್ದರಿಂದ ಅಣುವಾಗಲಿ, ಪರಮಾಣುವಾಗಲಿ ಪದಾರ್ಥದಿಂದ ತುಂಬಿದೆಯೆಂದು ತಿಳಿಯಬೇಕು. ಯಾವುದರಲ್ಲಾದರೂ ಪದ ಸ್ಥೂಲವಾಗಿ, ಅರ್ಥ ಸೂಕ್ಷ್ಮವಾಗಿ ಇರುತ್ತದೆಂದು ತಿಳಿಯಬೇಕು.

ವಿಶ್ವಕ್ಕೆಲ್ಲಾ ಅಧಿಪತಿ ಒಬ್ಬನೇ ಒಬ್ಬ ಇದ್ದಾನೆ. ಆತನೇ ದೇವರು. ದೇವರಿಗೆ ಹೆಸರುಗಳು ಇಲ್ಲ ಆದರೆ, ಆತನು ಇರುವ ವಿಧಾನಗಳೇ ಆತನಿಗೆ ಗುರುತಾಗಿ ಕರೆಯಲ್ಪಡುತ್ತಿವೆ. ದೇವರು ಎನ್ನುವುದು ಕೂಡಾ ಹೆಸರಲ್ಲ. ಹಾಗೆಯೇ ಪರಮಾತ್ಮ, ಪರಂಧಾಮ, ಈಶ್ವರ ಹೀಗೆ ಆತನನ್ನು ಉದ್ದೇಶಿಸಿ ಹೇಳುವವು ಯಾವುವೂ ಕೂಡಾ ಆತನ ಹೆಸರುಗಳಲ್ಲವೆಂದು ತಿಳಿಯಬೇಕು. ದೇವರು ವಿಶ್ವವೆಲ್ಲಾ ವ್ಯಾಪಿಸಿದ್ದಾನೆ. ಆದ್ದರಿಂದ ಆತನನ್ನು ವಿಶ್ವವ್ಯಾಪಿ ಎಂದು ಕರೆಯಬಹುದು. ಹಾಗೆಯೇ ಪ್ರತಿ ಪದಾರ್ಥದಲ್ಲಿಯೂ, ಪ್ರತಿ ವಸ್ತುವಿನಲ್ಲಿಯೂ ನಾಶವಾಗದ ಅರ್ಥವಾಗಿ ಉಳಿದಿದ್ದಾನೆ. ಆದ್ದರಿಂದ ಆತನನ್ನು (ದೇವರನ್ನು) "ಅರ್ಥಮ್" ಎಂದು ಕೂಡಾ ಹೇಳಬಹುದು. ಈ ವಿವರವನ್ನನುಸರಿಸಿ, ದೇವರು ಅರ್ಥಮ್ ಎಂದು ಕೂಡಾ ಕರೆಯಲ್ಪಡುತ್ತಿದ್ದಾನೆ. ಈಗ ಅಸಲು ವಿಷಯಕ್ಕೆ ಬರೋಣ. ಹುಟ್ಟಿದ ಪ್ರತಿ ಮನುಷ್ಯ ತನ್ನನ್ನು ಹುಟ್ಟಿಸಿದ ತಂದೆ ಯಾರೋ ತಿಳಿಯದೆ ಬದುಕಿದರೇ, ಆತನ ಬದುಕು ವ್ಯರ್ಥ ಎಂದು ಹೇಳಬಹುದು. ತನ್ನನ್ನು ಹುಟ್ಟಿಸಿದ ತಂದೆಯನ್ನು ಕುರಿತು ತಿಳಿಯದವನು, ತನ್ನ ತಂದೆ ಹೇಗಿರುತ್ತಾನೊಯೆಂದು ಕನಿಷ್ಟ ವಿಚಾರಿಸದವನು ಹುಟ್ಟಿ ಕೂಡಾ ಪ್ರಯೋಜನೆ ಇಲ್ಲವೆಂದು ಹೇಳಬಹುದು. ಪ್ರಪಂಚದಲ್ಲಿ ಹುಟ್ಟಿದ ಪ್ರತಿ ಮನುಷ್ಯ, ದೇವರ ಬೀಜದಿಂದಲೇ ಹುಟ್ಟುತ್ತಿದ್ದಾನೆ. ಇದನ್ನನುಸರಿಸಿ ಪ್ರತಿ ಮನುಷ್ಯನಿಗು ದೇವರು ಸ್ವತಃವಾಗಿ ತಂದೆಯಾಗಿದ್ದಾನೆ. ತನ್ನ ತಂದೆಯನ್ನು ತಿಳಿಯದವನು, ತನ್ನ ತಂದೆ ಇಂತಹವನೆಂದು ಹೇಳದವನು, ಹುಟ್ಟಿದರೂ, ಅವನ ಜೀವನ ವ್ಯರ್ಥವೆಂದೇ ಹೇಳಬಹುದು. ಅದರ ಪ್ರಕಾರ ದೇವರನ್ನು ಕುರಿತು ಜೀವನದಲ್ಲಿ ತಿಳಿಯದೆಹೋದರೆ ಅವನ ಜೀವನ ವ್ಯರ್ಥ. ಇದೇ ವಿಷಯವನ್ನು ಹೇಳುವುದಕ್ಕೇ "ಅರ್ಥವಿಲ್ಲದ ಜೀವನ ವ್ಯರ್ಥ" ಎಂದು ಗಾದೆಯಾಗಿ ಹೇಳಿದ್ದಾರೆ.

"ಅರ್ಥಮ್ ಎಂದರೇ ಎಲ್ಲವುದರಲ್ಲಿ ನಾಶವಾಗದೆ ಇರುವ ದೇವರೆಂದು ತಿಳಿಯಬೇಕು. ವ್ಯರ್ಥ ಎನ್ನುವ ಪದದಲ್ಲಿ ಅರ್ಥವಿದೆ. ವ್ಯರ್ಥ ಎನ್ನುವಮಾತಿಗೆ ಮೊದಲು ಜೀವನವಿದೆ. ಜೀವನ ಇರುವವನು ಜೀವಿ. ಜೀವಿಯು ನಾಶ ಇರುವವನೆಂದು ತಿಳಿಸುವುದಕ್ಕೆ ವ್ಯರ್ಥ ಎನ್ನುವ ಪದವನ್ನು ಹೇಳಿದ್ದಾರೆ. ದೇವರನ್ನು ತಿಳಿಯದವರೆಗು ಆ ಜೀವಿಯು ನಾಶವಾಗುವವನಾಗಿ ಇರುತ್ತಾನೆ. ದೇವರನ್ನು ತಿಳಿದ ಜೀವಿಯು ನಾಶವಾಗುವವನಾಗಿ ಇರದೆ ನಾಶ ಇಲ್ಲದವನಾಗಿ ಹೋಗುತ್ತಾನೆ, ಅಂದರೇ ಅವನು ಅರ್ಥವಾಗಿ ಬದಲಾಗಿಹೋಗುತ್ತಾನೆ. ದೇವರನ್ನು ತಿಳಿಯದವರೆಗು ಜೀವಿಯು ವ್ಯರ್ಥನೇ. ಆದ್ದರಿಂದ ಹಿರಿಯರು ಎಷ್ಟೋ ಯೋಚಿಸಿ "ಅರ್ಥವಿಲ್ಲದ ಜೀವನ ವ್ಯರ್ಥ" ಎಂದಿದ್ದಾರೆ. ನೋಡಿದ್ದೀರಾ! ನಮ್ಮ ಹಿರಿಯರು ಗತಿಸಿಹೋದರೂ, ಅವರು ಹೇಳಿಹೋದ ವಾಕ್ಯದಲ್ಲಿ ಎಷ್ಟೋ ನಿಧಿ ಅಡಗಿದೆಯೋ? ಭೂಮಿಯಲ್ಲಿ ಯಾರೋ ಹೂತಿಟ್ಟಿರುವ ನಿಧಿಗಳಿವೆಯೆಂದು ಅವುಗಳನ್ನು ಹುಡುಕಿದರೂ, ಅವು ದೊರೆತರೂ, ಆ ನಿಧಿಯಲ್ಲಿನ ಧನ ನಿನ್ನ ಹಿಂದೆ ಬರುವುದಿಲ್ಲ. ಅದು ನಿನ್ನ ಕರ್ಮವನ್ನು ಮೀರಿ ಉಪಯೋಗಪಡುವುದಿಲ್ಲ. ನಮ್ಮ ಹಿರಿಯರಾದ ಜ್ಞಾನಿಗಳು ಜ್ಞಾನಧನವನ್ನು ಭೂಮಿಯಲ್ಲಿ ಅಲ್ಲದೇ, ಮಾತುಗಳಲ್ಲಿ ಹೂತಿಟ್ಟು ಆ ಮಾತುಗಳನ್ನು (ಗಾದೆಗಳನ್ನು) ನಮ್ಮ ಮಧ್ಯದಲ್ಲಿ ಬಿಟ್ಟುಹೋಗಿದ್ದಾರೆ. ಇಂತಹ ಮಾತುಗಳ ನಿಧಿಗಳನ್ನು ತೆರೆದುನೋಡಿದರೆ, ಅಮಿತವಾದ ಜ್ಞಾನಧನ ಲಭಿಸುತ್ತಿದೆ. ಮಾತುಗಳ ನಿಧಿಗಳಿಗಾಗಿ ನೀವು ಪ್ರಯತ್ನಿಸದಿದ್ದರೂ, ಮಾತುಗಳಲ್ಲಿರುವ ಜ್ಞಾನ ನಿಧಿಗಳನ್ನು ಹೇಗೆ ತೆರೆಯಬೇಕೊ ನಿಮಗೆ ತಿಳಿಯದಿದ್ದರೂ, ಆ ನಿಧಿಗಳನ್ನು ತೆರೆದು ಅದರಲ್ಲಿರುವ ಜ್ಞಾನಧನವನ್ನು ನಿಮಗೆ ತೋರಿಸುತ್ತಿದೆ ಈ ಗ್ರಂಥ. ಇಷ್ಟು ಸುಲಭವಾಗಿ ಜ್ಞಾನ ಧನ ದೊರೆಯುತ್ತಿರುವಾಗ, ಅದರ ಬೆಲೆ ತಿಳಿಯದೆಹೋದರೂ, ಅದನ್ನು ಸ್ವೀಕರಿಸದೆ ಹೋದರೂ ನಿಮ್ಮ ಜೀವನ ಅರ್ಥವಿಲ್ಲದ್ದು ವ್ಯರ್ಥವೇ ಅಲ್ಲವೆ!

# 7. ಹೆಜ್ಜೆ ತಪ್ಪಿದರೇ ಅರವತ್ತಾರು ಗುಣಗಳು

ಈಗ ಮತ್ತೊಂದು ಜ್ಞಾನ ನಿಧಿಯಾದ ಗಾದೆಯನ್ನು ನೋಡೋಣ. "ಹೆಜ್ಜೆ ತಪ್ಪಿದರೇ ಅರವತ್ತಾರು ಗುಣಗಳು" ಆರು ಪಕ್ಕದಲ್ಲಿ ಆರು ಇಟ್ಟರೇ ಅದನ್ನು ಬಿಡಿಬಿಡಿಯಾಗಿ ಹೇಳಿದರೇ ಆರು ಮತ್ತು ಆರು (6, 6) ಎಂದು ಹೇಳಬಹುದು. ಎರಡು ಆರುಗಳನ್ನು ಕೂಡಿಸಿ ಹೇಳಿದರೇ ಹನ್ನೆರಡು (6+6=12) ಎಂದು ಹೇಳಬಹುದು. ಹಾಗಲ್ಲದೆ ಎರಡು ಆರುಗಳನ್ನು ಬಿಡಿಯಾಗಾಗಲಿ, ಕೂಡಿಸಿಯಾಗಲಿ ಹೇಳದಂತೆ, ವರಸೆ ಕ್ರಮದಲ್ಲಿ ದೊಡ್ಡ ಸಂಖ್ಯೆಯಾಗಿ ಹೇಳಿದರೆ, ಆರವತ್ತಾರು (66) ಎಂದು ಹೇಳಬಹುದು. ಗಾದೆಯಲ್ಲಿ 66 ಎಂದು ಅವರು ಮಾತುಗಳಿಂದ ಮುಚ್ಚಿಟ್ಟಿದ್ದಾರೆ. ಆದ್ದರಿಂದ ಅವುಗಳನ್ನು ಮೊದಲು ಹೇಳಿ ಕೊಂಡಂತೆ ಬಿಡಿಬಿಡಿಯಾಗಿಯೇ ಹೇಳಿಕೊಳ್ಳಬೇಕಾಗಿ ಬರುತ್ತದೆ. ಹಾಗೆ ಏಕೆ ಹೇಳಿಕೊಳ್ಳಬೇಕೆಂದು ತಿಳಿಯಬೇಕೆಂದರೇ, ಅವುಗಳಿಗೆ ಸಂಬಂಧಿಸಿದ ಸಮಾಚಾರ ವನ್ನು ಸ್ವಲ್ಪ ಮುಂಚೆಯೇ ತಿಳಿದುಕೊಳ್ಳಬೇಕು. ಮನುಷ್ಯನ ಶರೀರದಲ್ಲಿ ತಲೆಯಲ್ಲಿ ಮಾಯೆ ಎನ್ನುವುದು ಇದೆಯೆಂದು ತಿಳಿಯಬೇಕು. ಮಾಯೆ ಎನ್ನುವುದನ್ನು ದೇವರೇ ತಯಾರು ಮಾಡಿಟ್ಟಿದ್ದಾನೆ. ಆದ್ದರಿಂದ "ದೈವೀ ಹ್ಯೇಷಾ ಗುಣಮಯಿ ಮಮ ಮಾಯ" ಎಂದು ಭಗವದ್ಗೀತೆಯಲ್ಲಿ ವಿಜ್ಞಾನ ಯೋಗದಲ್ಲಿ 14ನೇ ಶ್ಲೋಕದಲ್ಲಿ, ಭಗವಂತನು ಹೇಳಿದ್ದಾನೆ. ದೇವರು ಮಾಯೆಯನ್ನು ಗುಣಗಳ ರೂಪದಿಂದ ತಯಾರಿ ಮಾಡಿಟ್ಟಿದ್ದಾನೆ. "ಮಮ ಮಾಯಾ" ಎಂದು ಶ್ಲೋಕದಲ್ಲಿ ಹೇಳುವುದರಿಂದ ಮಾಯೆ ತನ್ನದೇಯೆಂದು ಹೇಳಿದಂತೆ ತಿಳಿಯುತ್ತಿದೆ.

ಪರಮಾತ್ಮ ಪತಿಯಾಗಿದ್ದು, ಪ್ರಕೃತಿ ಪತ್ನಿಯಾಗಿದೆ. ಪತಿ ಸತಿಗಳಾಗಿರುವ ಪರಮಾತ್ಮ, ಪ್ರಕೃತಿ ಇಬ್ಬರು ಸೇರಿ ಸಂಸಾರ ಮಾಡುವುದರಿಂದ, ಇಷ್ಟು ಜಗತ್ತು ಏರ್ಪಟ್ಟಿದೆ. ದೇವರಿಗೆ ಪತ್ನಿಯಾಗಿರುವ ಪ್ರಕೃತಿಯೇ ಸರ್ವಜೀವರಾಶಿಗಳಿಗು ತಾಯಿಯಾಗಿದೆ. ದೇವರು ತನ್ನ ಪತ್ನಿಯನ್ನು ಎರಡು ಆಕಾರಗಳಾಗಿ ಇರುವಂತೆ ಮಾಡಿದ್ದಾನೆ. ಪ್ರಕೃತಿಯಾದ ತನ್ನ ಪತ್ನಿಗೆ ಎರಡನೆ ವೇಷವಾಗಿ ಇರುವಂತೆ ಮಾಡಿ, ಎರಡನೇ ರೂಪವಾಗಿರುವ ಆಕೆಗೆ ಮಾಯೆ ಎಂದು ಹೆಸರಿಟ್ಟಿದ್ದಾನೆ.

ಪ್ರಕೃತಿಯಾಗಿರುವ ಒಬ್ಬ ಪತ್ನಿಗೆ ಒಂದು ಕೆಲಸವನ್ನು, ಮಾಯೆ ಹೆಸರಿನಿಂದಿರುವ ಎರಡನೇ ಪತ್ನಿಗೆ ಒಂದು ಕೆಲಸವನ್ನು ಒಪ್ಪಿಸಿದ್ದಾನೆ. ತನ್ನ ಪತಿ ಹೇಳಿದಂತೆ ಇಬ್ಬರು ಪತ್ನಿಯರು ಕೆಲಸಗಳು ಮಾಡುತ್ತಿದ್ದಾರೆ. ಗುಣರೂಪದಲ್ಲಿರುವ ಎರಡನೇ ಪತ್ನಿಯಾದ ಮಾಯೆ ಮನುಷ್ಯರ ತಲೆಗಳಲ್ಲಿ ನಿವಾಸ ಮಾಡುತ್ತಿದೆ. ದೇವರಿಗೆ ಮೊದಲ ಪತ್ನಿಯಾದ ಪ್ರಕೃತಿ ಚರಪ್ರಕೃತಿ, ಅಚರಪ್ರಕೃತಿಯೆಂದು ಎರಡು ಭಾಗಗಳಾಗಿದೆ. ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಐದು ಭಾಗಗಳಾಗಿ ಅಚರ ಪ್ರಕೃತಿ ಇರುವಾಗ, ಸಕಲ ಜೀವರಾಶಿಗಳ ಶರೀರಗಳಾಗಿ ಚರಪ್ರಕೃತಿ ಇದೆ. ಇನ್ನು ಎರಡನೇ ಪತ್ನಿಯಾಗಿ ಪ್ರಕೃತಿ (ಮೊದಲ ಪತ್ನಿ) ಯಿಂದ ಬಿಡುಗಡೆಯಾಗಿ ಬಂದ ಮಾಯೆ ಕೂಡಾ, ಕಾಣಿಸದ ಆಕಾರ ಇರುವುದಾಗಿ ಎರಡು ಭಾಗಗಳಾಗಿದೆ, ಕಾಮ, ಕ್ರೋಧ, ಲೋಭ, ಮೋಹ, ಮಧ, ಮತ್ಸರ  ಎನ್ನುವ ಆರು ಜೀವಿಗೆ ಶತ್ರು ಗುಣಗಳಾಗಿ ಒಂದುಭಾಗ ಇರುವಾಗ, ದಾನ, ದಯ, ಔದಾರ್ಯ, ವಿನಯ, ಪ್ರೇಮ ಎನ್ನುವ ಆರು ಮಿತ್ರ ಗುಣಗಳ ಗುಂಪಾಗಿ ಎರಡನೇ ಭಾಗವಿದೆ.

ದೇವರಿಗೆ ಸತಿಯಾದ ಪ್ರಕೃತಿ ಕಾಣಿಸುವ ಪ್ರಪಂಚವಾಗಿ ಮತ್ತು ಜಗತ್ತಾಗಿ ಒಂದು ಆಕಾರವನ್ನು, ಕಾಣಿಸದ ಮಿತ್ರ ಮತ್ತು ಶತ್ರು ಗುಣಗಳೆನ್ನುವ ಮಾಯಾಕಾರವನ್ನು ಹೊಂದಿ ವಿಶ್ವವೆಲ್ಲಾ ವ್ಯಾಪಿಸಿದೆ. ದೇವರು ವಿಶ್ವವೆಲ್ಲ ಇದ್ದಾನೆ. ಆತನ ಸತಿಮಣಿ ಕೂಡಾ ಆತನೊಂದಿಗೆ ವಿಶ್ವವೆಲ್ಲ ವ್ಯಾಪಿಸಿದೆ. ಮಾಯೆ ಕೆಟ್ಟಗುಣಗಳಾಗಿ ಇಲ್ಲವೇ ಶತ್ರುಗುಣಗಳಾಗಿ ಕಾಮ, ಕ್ರೋಧ, ಮೋಹ, ಲೋಭ, ಮಧ, ಮತ್ಸರ ಎನ್ನುವ ಒಂದು ಆರು (6) ಗುಣಗಳಿರುವಾಗ, ಒಳ್ಳೆಯ ಗುಣಗಳಾಗಿ ಇಲ್ಲವೇ ಮಿತ್ರಗುಣಗಳಾಗಿ ದಾನ, ದಯೆ, ಔದಾರ್ಯ, ವೈರಾಗ್ಯ, ವಿನಯ, ಪ್ರೇಮ ಎನ್ನುವ ಮತ್ತೊಂದು ಆರು (6) ಗುಣಗಳಿರುವಾಗ ಒಟ್ಟು ಆರು, ಆರು (6, 6) ಎರಡು ಭಾಗಗಳಾಗಿ ತಿಳಿಯುತ್ತಿದೆ. ನಮ್ಮ ಶರೀರದಲ್ಲಿ ತಲೆಭಾಗದಲ್ಲಿ ನಾಲ್ಕುಚಕ್ರಗಳ ಸಮುದಾಯವು ಇದೆ. ತಲೆ ಮಧ್ಯದಲ್ಲಿರುವ ನಾಲ್ಕು ಚಕ್ರಗಳ ಆಕಾರವನ್ನು ನಂತರ ಚಿತ್ರದಲ್ಲಿ ನೋಡಬಹುದು.




ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳ ಚಿತ್ರವು

ಕೆಳಗಿನ ಚಕ್ರದಿಂದ ವರಸೆಕ್ರಮದಲ್ಲಿ ಹೇಳಿಕೊಂಡರೆ 1) ಗುಣಚಕ್ರ 2) ಕರ್ಮಚಕ್ರ 3) ಕಾಲಚಕ್ರ 4) ಬ್ರಹ್ಮಚಕ್ರ. ಕೆಳಗಿರುವ ಗುಣಚಕ್ರದಲ್ಲಿ ಮಾಯೆ ನಿವಾಸವಿದೆ. ಆ ಚಕ್ರದಲ್ಲಿಯೇ ಶರೀರದಲ್ಲಿನ ಜೀವಿಯು ನಿವಾಸ ಇದ್ದಾನೆ. ಮಾಯೆ ತಾಮಸ, ರಾಜಸ, ಸಾತ್ವಿಕ ಎನ್ನುವ ಮೂರು ಭಾಗಗಳಾಗಿದೆ. ಜೀವಿಯು ಮಾಡಿಕೊಂಡ ಕರ್ಮವನ್ನನುಸರಿಸಿ ಈ ಮೂರು ವಿಧಗಳ ಮಾಯೆಯಲ್ಲಿ ಯಾವುದೋ ಒಂದು ಮಾಯೆಯಲ್ಲಿ ಸಿಲುಕಿಕೊಳ್ಳುವುದು ನಡೆಯುತ್ತಿದೆ. ಜೀವಿಯು ಯಾವ ಭಾಗದ ಗುಣದಲ್ಲಿದ್ದರೂ ಆತನು ಮಾಯೆಯಲ್ಲಿದ್ದಂತೆ ಒಂದೇ ಮಾಯೆ, ಒಳ್ಳೆಯದು, ಕೆಟ್ಟದೆನ್ನುವ ಎರಡು ಭಾಗಗಳಾಗಿರುತ್ತಾ, ದೊಡ್ಡ ಮಾಯೆ, ಮಧ್ಯೆ ಮಾಯೆ, ಚಿಕ್ಕ ಮಾಯೆ ಎನ್ನುವ ಮೂರು ಗುಂಪುಗಳಾಗಿ ಹೇಗೆ ಇದೆಯೋ ನಂತರ ಚಿತ್ರದಲ್ಲಿ ನೋಡಿರಿ.

ನಾಲ್ಕು ಭಾಗಗಳಾಗಿ ಕಾಣಿಸುತ್ತಿರುವ ಚಕ್ರವನ್ನೇ ಗುಣಚಕ್ರ ಇಲ್ಲವೇ ಮಾಯಚಕ್ರವೆಂದು ಕರೆಯುತ್ತಿದ್ದೇವೆ. ಈ ಚಕ್ರದಲ್ಲಿನ ಹೊರಗಿನಿಂದ ಮೂರು ಭಾಗಗಳು ತಾಮಸ, ರಾಜಸ, ಸಾತ್ವಿಕ ಭಾಗಗಳಾಗಿ ಇವೆ. ಮೊದಲನೆಯದಾದ ತಾಮಸ ಭಾಗವನ್ನು ದೊಡ್ಡಮಾಯೆ ಎಂದೂ, ಮಧ್ಯದಲ್ಲಿನ ಎರಡನೆಯದಾದ ರಾಜಸ ಭಾಗವನ್ನು ಮಧ್ಯೆಮಾಯೆ ಎಂದೂ, ಮೂರನೆಯದಾದ ಸಾತ್ವಿಕ



ಗುಣಚಕ್ರ

ಭಾಗವನ್ನು ಚಿಕ್ಕಮಾಯೆ ಎಂದೂ ಹೇಳಬಲ್ಲೆವು. ಶರೀರದಲ್ಲಿನ ಜೀವಿಯು ಯಾವುದೊ ಒಂದು ಭಾಗದಲ್ಲಿದ್ದು ಮಾಯೆಯಲ್ಲಿಯೇ ಸಿಲುಕಿಕೊಂಡಿದ್ದಾನೆ. ಮನುಷ್ಯನಿಗು, ಮನುಷ್ಯನಿಗು ಆಯಾ ಜೀವಿಯು ನಿವಾಸಿಸುವ ಮಾಯೆಯಲ್ಲಿ ಚಿಕ್ಕ, ಮಧ್ಯೆ, ದೊಡ್ಡ ಎನ್ನುವ ವ್ಯತ್ಯಾಸಗಳಿರಬಹುದು ಆದರೆ, ಮನುಷ್ಯನಲ್ಲಿನ ಜೀವಿಯು ಮಾತ್ರ, ಯಾವುದೊ ಒಂದು ಮಾಯೆಯಲ್ಲಿ ಸಿಕ್ಕಿಕೊಂಡಿದ್ದಾನೆ. ಆ ಚಿತ್ರಗಳನ್ನು ಕೆಳಗೆ ನೋಡಬಹುದು.

ಚಿಕ್ಕಮಾಯೆ, ಮಧ್ಯೆಮಾಯೆ, ದೊಡ್ಡಮಾಯೆ ಎಂದು ಮಾಯೆ ಮೂರು ರೂಪಗಳಾಗಿ ಇರುವುದಲ್ಲದೇ, ಪ್ರತಿ ಭಾಗದಲ್ಲಿಯೂ ಒಳ್ಳೆಯ, ಕೆಟ್ಟ ಎರಡು ಗುಣಗಳಾಗಿದೆ. ತಾಮಸ, ರಾಜಸ, ಸಾತ್ತ್ವಿಕಗಳನ್ನು ಮೂರು ಭಾಗಗಳಾಗಿರುವ


ತಾಮಸ ಭಾಗದಲ್ಲಿ ಜೀವಿ.


ರಾಜಸ ಭಾಗದಲ್ಲಿ ಜೀವಿ.


ಸಾತ್ತ್ವಿಕ ಭಾಗದಲ್ಲಿ ಜೀವಿ.

ಮಾಯೆಯಲ್ಲಿ ಯಾವುದೊ ಒಂದು ಭಾಗದಲ್ಲಿ, ಮನುಷ್ಯನಲ್ಲಿನ ಜೀವಾತ್ಮ ಸಿಕ್ಕಿಕೊಂಡಿದೆ. ಪ್ರತಿ ಭಾಗದಲ್ಲಿಯು ಆರು ಕೆಟ್ಟ ಗುಣಗಳು, ಆರು ಒಳ್ಳೆಯ ಗುಣಗಳಿರುವುದರಿಂದ ಆ ವಿಷಯವನ್ನು ಗುಟ್ಟಾಗಿ ಆರವತ್ತಾರು (66) ಗುಣಗಳೆಂದು ಗಾದೆಯಲ್ಲಿ ಹೇಳಿದ್ದಾರೆ. ಗುಟ್ಟನ್ನು ರಟ್ಟು ಮಾಡಿ ನೋಡಿದರೇ ಆರವತ್ತಾರು ಅಲ್ಲವೆಂದರೂ, ಆರು ಮತ್ತು ಆರು (6, 6) ಎಂದೂ ತಿಳಿಯುತ್ತಿದೆ. ಮಧ್ಯಭಾಗದಲ್ಲಿರುವ ಜೀವಿಯು ಯಾವಕಡೆ ಹೋದರೂ, ಇತ್ತ ಸಾತ್ತ್ವಿಕದೊಳಗೆ ಹೋದರೂ, ಅತ್ತಾ ತಾಮಸದೊಳಗೆ ಹೋದರೂ, ಯಾವ ಭಾಗದಲ್ಲಾದರೂ ಆರು ಮತ್ತು ಆರು ಗುಣಗಳೇ ಇವೆ. ಆದ್ದರಿಂದ "ಹೆಜ್ಜೆ ತಪ್ಪಿದರೇ ಆರವತ್ತಾರು ಗುಣಗಳು" ಎಂದು ಗಾದೆಯಲ್ಲಿ ಹೇಳಿದ್ದಾರೆ. ಈ ಗಾದೆಯಿಂದ ಕಾಣಿಸದ ಮಾಯೆವೊಂದರ ನಿಜರೂಪ ಕಣ್ಣಿಗೆ ಕಾಣಿಸುವಂತೆ ತಿಳಿಯುತ್ತದೆ. ಇಂತಹ ಗಾದೆಯನ್ನು ತಯಾರು ಮಾಡಿ ಹೇಳಿದ ಹಿರಿಯರಿಗೆ ನಾವು ಎಂದಿಗೂ ಋಣಪಟ್ಟಿರುತ್ತೇವೆ.

## 8. ಅತಿ ರಹಸ್ಯ ಬಟ್ಟೆಬಯಲು

ಯಾರಿಗೂ ತಿಳಿಯದೇ ಇರುವ ವಿಷಯವನ್ನು ರಹಸ್ಯ ಎನ್ನುತ್ತೇವೆ. ಒಂದುವೇಳೆ ರಹಸ್ಯವಾಗಿ ಇರುವುದನ್ನು ಯಾರಾದರೂ, ಅವರಿಗೆ ತಿಳಿದು ಹೇಳಿದರೂ ಕೇಳಿದವನಿಗೆ ತಿಳಿಯದೇ ಹೋದರೆ, ಅದನ್ನು ರಹಸ್ಯಗಳಲ್ಲಿ ಅತಿ ರಹಸ್ಯ ಎನ್ನಬಹುದು. ಒಂದು ರಹಸ್ಯ ಯಾವಾಗಲೋ ಒಂದುಸಲ ಹೊರಗೆ ಬಂದರೂ, ಅದನ್ನು ಮೊದಲು ತಿಳಿದುಕೊಂಡವನು ಇತರರಿಗೆ ಹೇಳಿದರೂ, ಮೊದಲು ಹೇಳಿದವನಿಗಾಗಲಿ, ನಂತರ ಕೇಳಿದವರಿಗಾಗಲಿ ಯಾರಿಗೂ ತಿಳಿಯದ ಸಮಾಚಾರವನ್ನು ಅತಿ ರಹಸ್ಯ ಎಂದು ಹೇಳಬಹುದು. ಯಾರಿಗೂ ತಿಳಿಯದ ರಹಸ್ಯವನ್ನು ಪ್ರಜೆಗಳಿಗೆ ತಿಳಿಸುವ ಸಲುವಾಗಿ ಆಕಾಶವಾಣಿ ಒಬ್ಬ ಗುರುಗಳಿಗೆ ಹೇಳಿದೆ. ಗುರುಗಳ ಹತ್ತಿರಕ್ಕೆ ಬರುವವರಿಗೆಲ್ಲ ಆ ರಹಸ್ಯವನ್ನು ಆತನು ತಿಳಿಸುತ್ತಾನೆಂದು, ಆಕಾಶವಾಣಿ ರಹಸ್ಯ ವಿಷಯವನ್ನು ಗುರುವಿಗೆ ತಿಳಿಸಿದೆ. ಆಕಾಶವಾಣಿ ಹೇಳಿದ ರಹಸ್ಯವನ್ನು ಗುರು ಕೇಳಿದ್ದಾನೆ. ಗುರು ಆಕಾಶವಾಣಿ ಹೇಳಿದಾಗ ಕೇಳಿದ ರಹಸ್ಯವನ್ನು, ಕೇಳಿದ್ದು ಕೇಳಿದಂತೆ ಪ್ರಜೆಗಳಿಗೆ ತಿಳಿಸಿದ್ದಾನೆ.

ಆದರೂ ಆಕಾಶವಾಣಿ ಹೇಳಿದ ವಿಷಯ ಅತಿ ರಹಸ್ಯವಾಗಿಯೇ ಉಳಿದು ಹೋಗಿದೆ. ಹೇಳಿದರೂ ಅದೇಗೆ ರಹಸ್ಯವಾಗಿ ಉಳಿದುಹೋಗಿದೆ ಎಂದು ಯಾರಿಗಾದರೂ ಆಶ್ಚರ್ಯವಾಗುತ್ತದೆ ಅಲ್ಲವೇ! ಆ ವಿಷಯವನ್ನು ಹೇಳಿದರೂ ಅದು ಏಕೆ ರಹಸ್ಯವಾಗಿದೆಯೋ ವಿವರಿಸಿಕೊಳ್ಳೋಣ. ಅದಕ್ಕೆ ಒಂದು ಉದಾಹರಣೆಯನ್ನು ನೋಡೋಣ.

ಒಂದು ಊರಿನ ಹೊರಗಿರುವ ಗುಡಿಯಲ್ಲಿ 'ವಂದ' ಎನ್ನುವ ಹೆಸರಿರುವ ದೇವತೆ ಆ ಊರಿನಲ್ಲಿನ ಪ್ರಜೆಗಳನ್ನು ತಿಂಗಳಿಗೊಬ್ಬರನ್ನು ಸಾಯಿಸುತ್ತಿತ್ತು. ಪ್ರತಿ ಅಮಾವಾಸ್ಯೆಗು ಒಬ್ಬ ಮನುಷ್ಯ ಆ ಗುಡಿಮುಂದಕ್ಕೆ ಹೋಗಿ ಮರಣಿಸುತ್ತಿದ್ದನು. ಪ್ರತಿ ಅಮಾವಾಸ್ಯೆಗು ಹಾಗೆ ನಡೆಯುವುದರಿಂದ ಗುಡಿಗು ಆ ಮರಣಗಳಿಗು ಏನೊ ಸಂಬಂಧವಿದೆಯೆಂದು ಕೆಲವರು ಮೇಧಾವಿ ಗಳು ಗ್ರಹಿಸಿದ್ದಾರೆ. ಆ ವಿಷಯಕ್ಕೆ ಸಂಬಂಧಿಸಿದ ಸಮಾಚಾರ ಏನಾದರೂ ತಿಳಿಯುತ್ತದೇನೊಯೆಂದು, ಊರಹೊರಗಿನ ಗುಡಿಹತ್ತಿರಕ್ಕೆ ಹೋಗಿ ಅಲ್ಲಿ ಜಾಗ್ರತೆಯಾಗಿ ಪರಿಶೀಲಿಸಿದ್ದಾರೆ. ಅಲ್ಲಿ ಹುಡುಕಿದಾಗ ಅವರಿಗೆ ಒಂದು ಶಿಲಾ ಫಲಕವು ಕಾಣಿಸಿದೆ. ಆ ಶಿಲಾ ಫಲಕದ ಮೇಲೆ ಹೀಗೆ ಬರೆದಿದೆ. "ಈ ದೇವತೆಯನ್ನು ಪ್ರತಿಷ್ಠಿಸಿದ ನಂತರ ನೂರು ವರ್ಷಗಳಿಗೆ ಈ ಗುಡಿಯಲ್ಲಿನ ಪ್ರತಿಮೆಯಲ್ಲಿರುವ ದೇವತೆ ಹೋಗಿ, ಎರಡನೆ ದೇವತೆ ಗುಡಿಯಲ್ಲಿನ ಪ್ರತಿಮೆಯೊಳಗೆ ಬಂದು ಸೇರುತ್ತದೆ. ಹಾಗೆ ಬಂದಿರುವ ಎರಡನೆ ದೇವತೆ ತಿಂಗಳಿಗೊಬ್ಬ ಮನುಷ್ಯನನ್ನು ಬಲಿಯಾಗಿ ತೆಗೆದುಕೊಂಡು ಸಾಯಿಸಿಹಾಕುತ್ತದೆ. ಪ್ರತಿ ತಿಂಗಳು ನಡೆಯುವ ಪ್ರಾಣ ನಷ್ಟವನ್ನು ನಿವಾರಿಸಬೇಕೆಂದರೇ ನೂರುಗಂಟೆಗಳ ಕಾಲ, ಒಂದು ಮಂತ್ರವನ್ನು ಏಕಧಾಟಿಯಾಗಿ ಜಪಿಸಿ, ಕೊನೆಯಲ್ಲಿ ದೇವತೆಗೆ ಪೂಜೆ ಮಾಡಿದರೂ, ಅಲ್ಲಿಗೆ ಆ ದೇವತೆ ಶಾಂತಿಸಿ ನರಬಲಿಯಾಗಿ ಮನುಷ್ಯರನ್ನು ಸಾಯಿಸುವ ಕೆಲಸವನ್ನು ಬಿಡುತ್ತಾಳೆ." ಎಂದು ಬರೆದಿರುವುದನ್ನು ನೋಡಿದ್ದಾರೆ. ಆ ದೇವತೆಗು, ವಂದ ಎನ್ನುವ ಪದಕ್ಕೆ ಸಂಬಂಧ ಇರುವುದರಿಂದ, ಮಂತ್ರದಲ್ಲಿ ಕೂಡಾ ವಂದ ಎನ್ನುವ ಪದವಿದೆ. ಆ ದೇವತೆಯ ಹತ್ತಿರ ಜಪಿಸಬೇಕಾದ ಮಂತ್ರ "ಓಂ ವಂದ ಏಮಾತ್ರ ಸ್ವಾಹಾಃ" ಶಿಲಾಫಲಕದ ಮೇಲೆ ಬರೆದ ಮಂತ್ರವನ್ನು ನೋಡಿದ ಮೇಧಾವಿಗಳು, ಆ

ಪೂಜೆ ಮಾಡುವುದಕ್ಕೆ ಒಬ್ಬ ವ್ಯಕ್ತಿಯನ್ನು ಏರ್ಪಾಡು ಮಾಡಿದ್ದಾರೆ. ಆ ವ್ಯಕ್ತಿ ಕೂಡಾ ಶಿಲಾ ಫಲಕವನ್ನು ಒಂದುಸಲ ಓದಿಬಂದಿದ್ದಾನೆ. ಊರಿನ ಶ್ರೇಯಸ್ಸಿಗಾಗಿ ಒಂದು ದಿನ ಪೂಜೆಯನ್ನು ಪ್ರಾರಂಭಿಸಬೇಕೆಂದು ಕೊಂಡಿದ್ದಾರೆ.

ಆ ಗುಡಿಹತ್ತಿರ ತಿಂಗಳಿಗೊಬ್ಬ ಮನುಷ್ಯ ಏಕೆ ಮರಣಿಸುತ್ತಿದ್ದಾನೊ ಅದು ಯಾರಿಗೂ ತಿಳಿಯದ ರಹಸ್ಯ. ಆದರೂ ಒಂದು ಶಿಲಾ ಫಲಕದ ಮೇಲೆ ಬರೆಯಲ್ಪಟ್ಟ ಬರಹವನ್ನನುಸರಿಸಿ ಮರಣಗಳ ರಹಸ್ಯ ಎಲ್ಲರಿಗೂ ತಿಳಿದುಹೋಗಿದೆ, ಮರಣಗಳು ನಡೆಯದಂತೆ ಇರುವುದಕ್ಕೆ, ಮಾಡಬೇಕಾದ ತಂತ್ರಗಳು ಕೂಡಾ ತಿಳಿದುಹೋಗಿದೆ. ಹಾಗೆ ಮಾಡುವುದಕ್ಕೆ ಎಲ್ಲಾ ಸಿದ್ದಮಾಡಿಕೊಳ್ಳುವುದು ಕೂಡಾ ನಡೆದಿದೆ. ಕೊನೆಗೆ ಯಾರಿಗೂ ತಿಳಿಯದ ಮರಣಗಳ ರಹಸ್ಯ ಬಟ್ಟೆಬಯಲಾಗಿಹೋಗಿ ಎಲ್ಲರಿಗೂ ತಿಳಿದುಹೋಗಿದೆ. ಆ ಊರಿನವರು ಶಿಲಾಫಲಕದ ಮೇಲೆ ಇರುವಂತೆ ಮಂತ್ರ ಜಪಮಾಡಿ, ಪೂಜೆಮಾಡುವುದಕ್ಕೆ ಸಿದ್ದವಾಗಿ, ಮಂತ್ರಜಪ ಮಾಡಿ, ಪೂಜೆಮಾಡುವುದಕ್ಕೆ ಮನುಷ್ಯನನ್ನು ತಯಾರುಮಾಡಿ, ಒಂದುದಿನ ಆ ಕಾರ್ಯಕ್ಕೆ ಸಿದ್ಧವಾಗಿದ್ದಾರೆ. ಪೂಜೆಕಾರ್ಯವೆಲ್ಲವನ್ನು ತಯಾರಿ ಮಾಡಿಕೊಂಡ ಮನುಷ್ಯ, ಏಕದಾಟಿಯಾಗಿ ಮಂತ್ರವನ್ನು ಜಪಿಸಲು ಶುರುಮಾಡಿದ್ದಾನೆ. ಮಂತ್ರದಲ್ಲಿ ಒಂದು ಮುಖ್ಯವಾದ ಶಬ್ದ ವಂದ ವಂದಕ್ಕೆ ಆಧಾರವಾಗಿ 'ಏಮಾತ್ರ' ಎಂದು ಇದೆ. ಮಂತ್ರವನ್ನು ಜಪಿಸುವ ವ್ಯಕ್ತಿ "ಓಂ ವಂದ ಏಮಾತ್ರ ಸ್ವಾಹಾಃ" ಎನ್ನಲುಹೋಗಿ, "ಓಂ ವಂದೇ ಮಾತ್ರ ಸ್ವಾಹಾಃ" ಎನ್ನುವುದನ್ನು ಶುರುಮಾಡಿದ್ದಾನೆ. ಆ ವಿಧವಾಗಿ ಮಂತ್ರವನ್ನು ನೂರು ಗಂಟೆಗಳ ಕಾಲ ಏಕಧಾಟಿಯಾಗಿ ಓದಿ, ಕೊನೆಯಲ್ಲಿ ದೇವತೆಯ ಪೂಜೆಯನ್ನು ಘನವಾಗಿ ಮಾಡಿದ್ದಾರೆ. ಅಲ್ಲಿಗೆ ತಮ್ಮ ಕಷ್ಟಗಳು ತೀರಿಹೋಗಿ, ತಿಂಗಳಿಗೊಮ್ಮೆ ನಡೆಯುವ ಮಾರಣ ಹೋಮ ನಿಂತುಹೋ ಗುತ್ತದೆಂದು ಸಂತೋಷಿಸಿದ್ದಾರೆ. ಆ ಗುಡಿಯ ಹತ್ತಿರ ಶುಭ್ರಮಾಡಿ ಗುಡಿ ಪಕ್ಕದಲ್ಲಿಯೇ ರಸ್ತೆಯನ್ನು ಕೂಡಾ ಹಾಕುವುದು ನಡೆದಿದೆ. ರಸ್ತೆಯನ್ನು ಹಾಕುವಾಗ ಶಿಲಾಫಲಕವು ಕೂಡಾ ಮಣ್ಣಿನಲ್ಲಿ ಹೂತುಹೋಗಿದೆ.

ಶಿಲಾಫಲಕದಿಂದ ಕೆಲಸ ಮುಗಿದುಹೋಗಿದೆಯೆಂದುಕೊಂಡು ಅಲ್ಲಿನವರ್ಯಾರೂ ಅದನ್ನು ಹಿಡಿಸಿಕೊಳ್ಳದಿರುವುದರಿಂದ ಅದು ಮಣ್ಣಿನಲ್ಲಿ

ಹೂತುಹೋಗುವುದು ನಡೆದಿದೆ. ಗುಡಿ ಹತ್ತಿರ ಗಲಬೆ ಎಲ್ಲವೂ ಮುಗಿದುಹೋಗಿ ಎಲ್ಲರೂ ನಿಟ್ಟುಸಿರು ಬಿಟ್ಟಿದ್ದಾರೆ. ಅಷ್ಟರಲ್ಲಿಯೇ ಒಂದು ತಿಂಗಳು ಕಳೆದುಹೋಗಿದೆ ಅಮವಾಸ್ಯೆ ಬಂದೆಬಂದಿತು. ಅಮಾವಾಸ್ಯೆ ಕಳೆದುಹೋದ ಮರುದಿನ; ಗುಡಿಮುಂದೆ ಆ ಊರಿನಲ್ಲಿನ ವ್ಯಕ್ತಿ ರಕ್ತವನ್ನು ಕಕ್ಕಿಕೊಂಡು ಮರಣಿಸಿದ್ದಾನೆ. ಆ ವಾರ್ತೆ ಊರಿನಲ್ಲಿರುವವರೆಲ್ಲರಿಗೂ ತಿಳಿದು ಆಶ್ಚರ್ಯಹೋಗಿದ್ದಾರೆ. ತಾವು ಮಾಡಬೇಕಾಗಿರುವುದೆಲ್ಲ ಮಾಡಿದರೂ, ಪುನಃ ಮೊದಲಿನಂತೆ ನಡೆಯುವುದು ಅವರಿಗೆ ಭಯವನ್ನು ಹುಟ್ಟಿಸಿದೆ. ಕೂಡಲೇ ಆ ಊರಿನ ಯಜಮಾನ ತನಗೆ ಪರಿಚಯವಿರುವ, ಎಲ್ಲಾ ವಿದ್ಯೆಗಳು ಕಲಿತಿರುವ ವ್ಯಕ್ತಿಯನ್ನು ಬೇಟಿಯಾಗಿ ನಡೆದಿರುವ ವಿಷಯವೆಲ್ಲವನ್ನು ವಿವರಿಸಿ ಹೇಳಿದ್ದಾನೆ. ಆ ವೃತ್ತಾಂತವೆಲ್ಲವೂ ಕೇಳಿದ ಆ ಪಂಡಿತನು, ಆ ಪೂಜಾಕಾರ್ಯ ಕ್ರಮವನ್ನು ನಿರ್ವಹಿಸಿದ ವ್ಯಕ್ತಿಯನ್ನು ಕರೆದು, ಆತನು ಮಾಡಿದ ಕಾರ್ಯಕ್ರಮವನ್ನು ಕುರಿತು ಕೇಳಿದ್ದಾನೆ. ಆಗ ಪೂಜಾಕಾರ್ಯವನ್ನು ನಿರ್ವಹಿಸಿದ ವ್ಯಕ್ತಿ ತಾನು ಮಾಡಿರುವುದೆಲ್ಲಾ ಮಣಿಪೋಣಿಸಿದಂತೆ ಹೇಳಿದ್ದಾನೆ. ತಾನು ನೂರು ಗಂಟೆಗಳ ಕಾಲ ಏಕಧಾಟಿ ಯಾಗಿ ಜಪಿಸಿದ ಮಂತ್ರವನ್ನು ಕುರಿತು ಕೂಡಾ ಹೇಳಿದ್ದಾನೆ. ಅದೆಲ್ಲವೂ ಕೇಳಿದ ಪಂಡಿತನು ಮಂತ್ರದ ಮೇಲೆ ಅನುಮಾನ ಬಂದು ಮಂತ್ರವನ್ನು ಹೇಳೆಂದು ಕೇಳಿದ್ದಾನೆ. ಆಗ ತಾನು ಜಪಿಸಿದ ಮಂತ್ರವನ್ನು "ಓಂ ವಂದೇ ಮಾತ್ರ ಸ್ವಾಹಃ" ಎಂದು ಜಪಿಸಿದ ವ್ಯಕ್ತಿ ಹೇಳಿದ್ದಾನೆ. ಆ ಮಂತ್ರವನ್ನು ಕೇಳಿದ ಪಂಡಿತನು, ಇಲ್ಲಿಯೇ ತಪ್ಪು ನಡೆದಿದೆಯೆಂದು ಹೇಳಿದ್ದಾನೆ. ಅದು ಹೇಗೆ ನಡೆದಿದೆಯೆಂದು ಊರಿನ ಯಜಮಾನ, ಪಂಡಿತನನ್ನು ಪ್ರಶ್ನಿಸಿದ್ದಾನೆ. ಆಗ ಪಂಡಿತನು ಹೀಗೆ ಹೇಳಿದ್ದಾನೆ.

"ಆ ಗುಡಿಯಲ್ಲಿ ಇರುವುದು ಹೆಣ್ಣುದೇವತೆ ಆದ್ದರಿಂದ ಮಂತ್ರದಲ್ಲಿ ಮಾತೆ ಎಂದು ಇರಬೇಕಾದ ಕಡೆ ಮಾತ್ರ ಎಂದು ಹೇಳುವುದರಿಂದ, ಮಂತ್ರೋಚ್ಚಾರಣೆಯಲ್ಲಿ ದೋಷ ಏರ್ಪಟ್ಟು, ಆ ಪೂಜೆ ಫಲಿಸಲಿಲ್ಲ. ಆದ್ದರಿಂದ ನೀವು ಮಾಡಿದ ಕೆಲಸವೆಲ್ಲವೂ ವ್ಯರ್ಥವಾಗಿದೆ" ಎಂದು ಹೇಳಿದ್ದಾನೆ. ಊರಿನ ಯಜಮಾನ ಶಿಲಾಫಲಕವನ್ನು ಅದರಲ್ಲಿನ ಮಂತ್ರವನ್ನೂ ನೋಡಿರುವುದರಿಂದ, ಆತನಿಗೆ ಮಂತ್ರದಲ್ಲಿ, ಮಾತ್ರ ಎಂದು ಇರುವುದು ಚೆನ್ನಾಗಿ ಜ್ಞಾಪಕ

ಇರುವುದರಿಂದ, ಅದೇಮಾತನ್ನು ಪಂಡಿತನೊಂದಿಗೆ "ಶಿಲಾಫಲಕದ ಮೇಲೆ ಮಾತ್ರ ಎನ್ನುವ ಪದ ಇರುವುದು ನಾನು ಕೂಡ ನೋಡಿದ್ದೇನೆ. ಹಾಗೆಯೇ ಮಂತ್ರವನ್ನು ಜಪಿಸುವುದು ನಡೆದಿದೆ. ಜಪಿಸಿದ ಈ ವ್ಯಕ್ತಿಯದ್ದು ತಪ್ಪೇನು ಇಲ್ಲ" ಎಂದು ಹೇಳಿದ್ದಾನೆ. ಆ ಮಾತು ಕೇಳಿದ ಪಂಡಿತನು ದೀರ್ಘವಾಗಿ ಆಲೋಚಿಸಿ ಹೀಗೆ ಹೇಳಿದ್ದಾನೆ "ಆದರೇ ಶಿಲಾಫಲಕದ ಮೇಲೆ ಬರೆಯುವವರು ತಪ್ಪಾಗಿ ಮಾತ ಎಂದು ಬರೆಯಲುಹೋಗಿ ಮಾತ್ರ ಎಂದು ಬರೆದಿರುತ್ತಾರೆ. ಹೇಗಾದರೇನು ನಡೆದ ತಪ್ಪು ತಿಳಿದುಹೋಗಿದೆ ಅಲ್ಲವೆ! ತಪ್ಪನ್ನು ಸರಿತಿದ್ದುಕೊಂಡು ಈ ಸಲ ಸಕ್ರಮವಾಗಿ ಪೂಜೆ ಮಾಡಿದರೆ ಸರಿಹೋಗುತ್ತದೆ." ಎಂದು ಹೇಳಿದ್ದಾನೆ. ಆಗ ಊರಿನ ಹಿರಿಯರು ಪೂಜಾ ಕಾರ್ಯಕ್ರಮವನ್ನು ಮಾಡುವುದಕ್ಕೆ, ಆ ಪಂಡಿತನನ್ನೇ ಒಪ್ಪಿಸಿದ್ದಾರೆ. ಒಂದು ಶುಭ ಮುಹೂರ್ತದಲ್ಲಿ ಆ ಪಂಡಿತನು ಊರಿನ ಹೊರಗಿರುವ ಗುಡಿಹತ್ತಿರ ದೊಡ್ಡದಾಗಿ ಪೂಜಾ ಕಾರ್ಯಕ್ರಮವನ್ನು ಏರ್ಪಾಡು ಮಾಡಿ, ನೂರುಗಂಟೆಗಳ ಕಾಲ ಮಂತ್ರವನ್ನು ಜಪಿಸಿದನು. ಈ ಸಲ ಪಂಡಿತನು ಜಪಿಸಿದ ಮಂತ್ರ "ಓಂ ವಂದೇ ಮಾತ ಸ್ವಾಹಾಃ" ಎಂದು ಜಪಿಸಿದ್ದಾನೆ.

ಮೊದಲು ಶಿಲಾಫಲಕದ ಮೇಲೆ ಬರೆಯಲ್ಪಟ್ಟಿರುವ ಮಂತ್ರ "ಓಂ ವಂದ ಏಮಾತ್ರ ಸ್ವಾಹಃ" ಎಂದು ಇರುವಾಗ, ಪೂಜೆಯನ್ನು ನಿರ್ವಹಿಸಿದ ವ್ಯಕ್ತಿ ಮಂತ್ರದಲ್ಲಿ ವಂದ ಎನ್ನುವ ಪದ ಇರುವುದಿಲ್ಲ, ನಮಸ್ಕಾರವನ್ನು ತಿಳಿಸುವ ಅರ್ಥವನ್ನುಕೊಡುವ ವಂದೇ ಎಂದು ಇರುತ್ತದೆ. ಆದರೇ ಅದು ಬರೆಯುವುದರಲ್ಲಿ ವಂದ ಏ ಮಾತ್ರ ಎಂದು ತಪ್ಪಾಗಿ ಬರೆದಿದ್ದಾರೆಂದು ಅಂದುಕೊಂಡು, ವಂದ+ಏ ವಂದೇ ಎಂದು ಮಾಡಿದ್ದಾನೆ. ಎರಡನೆ ಪಂಡಿತನು ಮಾತ್ರನು ನೋಡಿ ಮಾತ ಎಂದು ಇರುತ್ತದೆ, ತಪ್ಪಾಗಿ ಮಾತ್ರ ಎಂದು ಬರೆದಿದ್ದಾರೆಂದು ಅಂದುಕೊಂಡು ಮಂತ್ರವನ್ನು "ಓಂ ವಂದೇ ಮಾತ ಸ್ವಾಹಾ" ಎಂದು ಬರೆದುಕೊಂಡಿದ್ದಾನೆ. ಅಸಲು ಮಂತ್ರ ವಂದ ಎನ್ನುವ ಹೆಸರಿರುವ ದೇವತೆಯದ್ದು. ಆದ್ದರಿಂದ ಆಕೆ ಹೆಸರಿಗೆ ಗುರುತಾಗಿ ವಂದ ಎನ್ನುವ ಪದವನ್ನು ಹಿರಿಯರು ಇಟ್ಟರೆ, ಆ ಮಂತ್ರ "ಓಂ ವಂದ ಏಮಾತ್ರ ಸ್ವಾಹಾ" ಆಗಿದೆ. ವಂದ ಏಮಾತ್ರ ಎಂದರೇ, ವಂದ ದೇವತೆ ಎಷ್ಟು ಶ್ರೇಷ್ಟಳಾಗಿರುವುದು ಯಾರಿಗೂ

ತಿಳಿದಿಲ್ಲ ಎನ್ನುವ ಅರ್ಥ ಬರುವಂತೆ, 'ಏಮಾತ್ರ ಸ್ವಾಹ'ವನ್ನು ಸೇರಿಸಿ ಓಂ ವಂದ ಏಮಾತ್ರ ಸ್ವಾಹಃ ಎಂದು ಅಸಲು ಮಂತ್ರವನ್ನು ಹೇಳಿದಾಗ, ಮೊದಲ ಪಂಡಿತನು ಆ ಮಂತ್ರವನ್ನು "ಓಂ ವಂದೇ ಮಾತ್ರ ಸ್ವಾಹಃ" ಆಗಿ ಬದಲಾಯಿಸಿದ್ದಾನೆ. ಎರಡನೆ ಪಂಡಿತನು, ಆತನ ತಿಳುವಳಿಕೆಯಿಂದ ಮಂತ್ರವನ್ನು ಬದಲಿಸಿ "ಓಂ ವಂದೇ ಮಾತ ಸ್ವಾಹ" ಎಂದು ಹೇಳಿದ್ದಾನೆ.

**ಓಂ ವಂದ ಏಮಾತ್ರ ಸ್ವಾಹ (ಶಿಲಾಫಲಕದ ಮೇಲೆ ಅಸಲು ಮಂತ್ರ)**
**ಓಂ ವಂದೇ ಮಾತ್ರ ಸ್ವಾಹ (ಮೊದಲ ಪಂಡಿತನು ಬದಲಾಯಿಸಿದ ಮಂತ್ರ)**
**ಓಂ ವಂದೇ ಮಾತ ಸ್ವಾಹ (ಎರಡನೆ ಪಂಡಿತನು ಬದಲಾಯಿಸಿದ ಮಂತ್ರ)**

ಊರಿನಹೊರಗೆ ಗುಡಿಹತ್ತಿರ, ಮನುಷ್ಯರ ಮರಣಗಳು ಏಕೆ ನಡೆಯುತ್ತಿವೆಯೋ ತಿಳಿಯದಿರುವುದು ರಹಸ್ಯವಾಗಿದ್ದು, ಇದು ಕಾರಣವೆಂದು ಶಿಲಾಫಲಕದ ಮೇಲೆ ಬರಹ, ಆ ರಹಸ್ಯವನ್ನು ಎಲ್ಲರಿಗೂ ತಿಳಿಯುವಂತೆ ಬಟ್ಟೆಬಯಲು ಮಾಡಿದೆ. ಶಿಲಾಫಲಕದ ಮೇಲೆ ರಹಸ್ಯ ಬಟ್ಟೆಬಯಲಾದ ಶಿಲಾಫಲಕ ಹೇಳಿರುವುದನ್ನು ಪಂಡಿತರ ಮನೋಭಾವನೆಗಳು ಬದಲಾಯಿಸುವುದರಿಂದ, ರಹಸ್ಯ ಹೇಳಿದರೂ ರಹಸ್ಯವಾಗಿಯೇ ಉಳಿದುಹೋಗಿದೆ. ತಿಳಿಯದಿರುವುದು ರಹಸ್ಯವಾಗಿದ್ದು, ಅದನ್ನು ತಿಳಿಸಿ ಬಟ್ಟೆಬಯಲು ಮಾಡಿದಾಗ, ಅತಿ ರಹಸ್ಯ ಬಟಾಬಯಲು ಎಂದು ಹೇಳಬಹುದು. ಹೇಳಿದರೂ ಅರ್ಥವಾಗದಿರುವಾಗ ರಹಸ್ಯ ಅತಿ ರಹಸ್ಯವಾಗುತ್ತಿದೆ. ರಹಸ್ಯವನ್ನು ಕುರಿತು ಹೇಳಿರುವುದು ಇರುವಾಗ, ಅದನ್ನು ಬಟ್ಟಬಯಲು ಎಂದು ಕೆಲವರು ಹೇಳುತ್ತಿದ್ದಾರೆ.

ನಾವು ಉದಾಹರಣೆಗೆ ಹೇಗೆ ಹೇಳಿಕೊಂಡರೂ, ವಾಸ್ತವವಾಗಿ ಪ್ರಪಂಚದಲ್ಲಿ ಅತಿ ರಹಸ್ಯವಾದುದು ಒಂದೇವೊಂದು ಇದೆ. ಅದೇ ದೈವ. ದೇವರು ಸೃಷ್ಠಿ ಆದಿಯಿಂದ ರಹಸ್ಯವಾಗಿ ಇದ್ದಾನೆ. ಇಲ್ಲಿಯವರೆಗು ದೇವರನ್ನು ನೋಡಿದವನು ಯಾರೂ ಜಗತ್ತಿನಲ್ಲಿ ಇಲ್ಲ. ಆದ್ದರಿಂದ ಆತನನ್ನು ಹುಡುಕಲ್ಪಡುವವನು ದೇವರು ಎಂದಿದ್ದಾರೆ. ಅಷ್ಟು ರಹಸ್ಯವಾದ ದೇವರು, ಯಾವಾಗಲೂ ನಮ್ಮ ಎದುರುಗಡೆಯೇ ಇದ್ದಾನೆ. ಎದುರುಗಡೆಯೇ ಅಲ್ಲ

ಹಿಂದೆ ಕೂಡಾ ಇದ್ದಾನೆ. ದೇವರು ಪ್ರಪಂಚವೆಲ್ಲ ಅಣುಅಣುವಿನಲ್ಲಿಯೂ ವ್ಯಾಪಿಸಿದ್ದಾನೆ. ದೇವರು ಎಷ್ಟು ರಹಸ್ಯವಾದವನಾದರೂ ಗುಡಿಹತ್ತಿರ ಶಿಲಾಫಲಕದ ಮೇಲೆ ಬರೆದಿಟ್ಟಂತೆ, ರಹಸ್ಯವಾದ ದೇವರನ್ನು ಕುರಿತು ಎಲ್ಲರಿಗೂ ತಿಳಿಯುವಂತೆ, ಭಗವದ್ಗೀತೆಯಲ್ಲಿ ಪೂರ್ತಿಯಾಗಿ ಬರೆಯಲ್ಪಟ್ಟರೂ, ಮನುಷ್ಯ ಸ್ವಂತ ಭಾವನೆಗಳನ್ನು ಕಲ್ಪಿಸಿಕೊಂಡು, ಗೀತೆಯಲ್ಲಿ ಹೇಳಿರುವುದನ್ನು ಬಿಟ್ಟು, ಬೇರೆ ವಿಧಾನದಲ್ಲಿ ಇರುವುದರಿಂದ, ಎಷ್ಟೋ ರಹಸ್ಯವಾದವನು ಎಲ್ಲಾಕಡೆ ವ್ಯಾಪಿಸಿ ಬಟ್ಟೆಬಯಲಾಗಿ ಇದ್ದರೂ, ರಹಸ್ಯವಾದ ದೇವರನ್ನು ತಿಳಿಯದೆ ಮನುಷ್ಯ ಹುಡುಕುತ್ತಲೇ ಇದ್ದಾನೆ. ದೇವರು ಎಲ್ಲಾಕಡೆ ವ್ಯಾಪಿಸಿ, ಮುಚ್ಚು ಮರೆಯಿಲ್ಲದ ಜ್ಞಾನ ಹೊಂದಿದ್ದು. ಯಾರಿಗೂ ತಿಳಿಯದ ರಹಸ್ಯವಾಗಿರುವುದರಿಂದ, ಆ ವಿಷಯ ಅರ್ಥವಾಗುವುದಕ್ಕೆ ಹಿರಿಯರು "ಅತಿ ರಹಸ್ಯ ಬಟ್ಟೆಬಯಲು" ಎನ್ನುವ ಗಾದೆಯಾಗಿ ಹೇಳಿದ್ದಾರೆ.

**ಬಟ್ಟೆಬಯಲು :–** ಎಲ್ಲಾಕಡೆ ವ್ಯಾಪಿಸಿದವನು, ತೆರೆ ತೆಗೆದ ದೃಶ್ಯ ಕಾಣಿಸುವಂತೆ ಕಾಣಿಸುತ್ತದೆ.

**ನೋಡುವವನು :–** ಜೀವಿಯು, ತೋರಿಸುವವನು ಗುರು. ದೇವರನ್ನು ತಿಳಿದರೇ ದೇವರು ಬಟಾಬಯಲು. ತಿಳಿಯದಿದ್ದರೆ ದೇವರು ಅತಿ ರಹಸ್ಯ.

ಪ್ರತಿ ಅಮಾವಾಸ್ಯೆಗು ಮರಣವಿರುವಂತೆ, ಪ್ರತಿ ಜನ್ಮಕ್ಕು ಮರಣವಿದೆ. ಅಮಾವಾಸ್ಯೆಯನ್ನು ಮರಣವನ್ನು ತಪ್ಪಿಸಿಕೊಳ್ಳುವುದಕ್ಕೆ ಮಂತ್ರ ಜಪ, ಪೂಜೆ ಕಡ್ಡಾಯವಾದಂತೆ, ಜನ್ಮವನ್ನೂ, ಮರಣವನ್ನೂ ತಪ್ಪಿಸಿಕೊಳ್ಳುವುದಕ್ಕೆ ಜ್ಞಾನ, ಯೋಗ ತಪ್ಪದೆ ಇದೆ. ಶಿಲಾಫಲಕದ ಮೇಲೆ ಮಂತ್ರವನ್ನು ತಪ್ಪಾಗಿ ಅರ್ಥಮಾಡಿಕೊಳ್ಳುವುದರಿಂದ, ಅಮಾವಾಸ್ಯೆ ಮರಣಗಳು ತಪ್ಪದಂತೆ, ಭಗವದ್ಗೀತೆಯಲ್ಲಿ ಬೋಧನೆಯನ್ನು ತಪ್ಪಾಗಿ ಅರ್ಥ ಮಾಡಿಕೊಳ್ಳುವುದರಿಂದ ಜನನ ಮರಣಗಳು ತಪ್ಪಲಿಲ್ಲ.

## 9. ಅಂದ. ಚಂದವಿಲ್ಲದ ಗಂಡ ಮಂಚದ ತುಂಬ ಇದ್ದಂತೆ

ಸೃಷ್ಠಿಕರ್ತನಾದ ದೇವರಿಗೆ ಹೆಸರಿಲ್ಲ, ಆಕಾರವಿಲ್ಲ. ಆದ್ದರಿಂದ ಆತನನ್ನು ರೂಪ, ನಾಮ ಇಲ್ಲದವನೆಂದಿದ್ದಾರೆ. ಹೆಸರಾಗಲಿ, ಅಂದವಾಗಲಿ ಇಲ್ಲದವನು ದೇವರೆಂದು, ಎಲ್ಲರಿಗೂ ತಿಳಿಯದಿದ್ದರೂ ಕೆಲವರಿಗಾದರೂ ತಿಳಿದಿರುತ್ತದೆ. ಕಣ್ಣಿಗೆ ಕಾಣಿಸದ ದೇವರು ಎಲ್ಲಿದ್ದಾನೆಂದು ಯಾರಾದರು ಕೇಳಿದರೂ, ಇಲ್ಲಿದ್ದಾನೆಂದು ಹೇಳಲಾರೆವು. ಏಕೆಂದರೇ ದೇವರ ಸರ್ವವ್ಯಾಪಿ, ಅಣು ಅಣುವಿನಲ್ಲಿ ವ್ಯಾಪಿಸಿದವನು. ಆತನು ಇಲ್ಲದ ಸ್ಥಳವಂತೂ ಯಾವುದು ಇಲ್ಲ. ಈ ವಿಷಯವನ್ನು ಭಗವದ್ಗೀತೆಯಲ್ಲಿ ಎಷ್ಟೋಸಲ ದೇವರೇ ಹೇಳಿದ್ದಾನೆ. ಉದಾಹರಣೆಗೆ ವಿಜ್ಞಾನಯೋಗದಲ್ಲಿ 7ನೇ ಶ್ಲೋಕದಲ್ಲಿ...

**ಶ್ಲೋ॥ ಮತ್ತಃ ಪರತರಂ ನಾನ್ಯತ್ ಕಿಂಚಿ ದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇಮಣಿಗಣಾ ಇವ ॥**

**ಭಾವಾರ್ಥ :–** ನನ್ನನ್ನು ಮೀರಿ ಹೆಸರುಹೊಂದಿರುವುದು ಜಗತ್ತಿನಲ್ಲಿ ಯಾವುದೂ ಇಲ್ಲ. ದಾರದಲ್ಲಿ ಮಣಿಗಳು ಪೋಣಿಸಿದಹಾಗೆ, ಸಕಲ ಲೋಕದಲ್ಲಿ ನಾನು ವ್ಯಾಪಿಸಿದ್ದೇನೆ. ಇಲ್ಲಿ ಈ ಶ್ಲೋಕದಲ್ಲಿ ಹೇಳಿದಂತೆ, ವಿಶ್ವವೆಲ್ಲಾ ವ್ಯಾಪಿಸಿರುವ ದೇವರನ್ನು ಯಾರೂ ನೋಡಲಿಲ್ಲ. ಯಾರಿಗೂ ಕಾಣಿಸದಂತಿರುವ ದೇವರು, ಜಗತ್ತಿನಲ್ಲಿ ಎಲ್ಲರನ್ನು ನಿಬಾಯಿಸುವವನಾಗಿ ಭರಿಸುವವನಾಗಿ ಇದ್ದಾನೆ. ಆದ್ದರಿಂದ ಆತನನ್ನು ಜಗತ್‌ಪತಿ ಎಂದು ಕರೆದಿದ್ದಾರೆ. ಪ್ರತಿ ಮನುಷ್ಯನಿಗು ಪತಿಯಾಗಿರುವ ದೇವರು, ಪ್ರಪಂಚವೆಲ್ಲಾ ವ್ಯಾಪಿಸಿರುವುದೇ ಅಲ್ಲದೇ ರೂಪ, ನಾಮಗಳು ಇಲ್ಲದವನಾಗಿ ಇರುವುದರಿಂದ, ಆತನ ವಿಧಾನವನ್ನು ಒಂದು ಮಾತಿನಲ್ಲಿ ಗಾದೆಯಾಗಿ ಹೇಳುವುದಕ್ಕೆ "ಅಂದ, ಚಂದ ಇಲ್ಲದ ಗಂಡ ಮಂಚದ ತುಂಬಾ ಇದ್ದಂತೆ" ಎಂದಿದ್ದಾರೆ. ರೂಪ, ಹೆಸರು ಇಲ್ಲದವನು ಆದ್ದರಿಂದ ದೇವರನ್ನು, ಅಂದ, ಚಂದ ಇಲ್ಲದ ಎಂದು ಹೇಳಿದ್ದಾರೆ. ದೇವರು ಎಲ್ಲರನ್ನು ಭರಿಸುವವನು ಆದ್ದರಿಂದ, ಆತನನ್ನು ಅಂದ ಚಂದ ಇಲ್ಲದ ಗಂಡ ಎಂದಿದ್ದಾರೆ. ದೇವರು ಪ್ರಪಂಚವೆಲ್ಲ ಮತ್ತು ಜಗವೆಲ್ಲಾ ವ್ಯಾಪಿಸಿದ್ದಾನೆ. ಆದ್ದರಿಂದ ಮಂಚದ ತುಂಬಾ ಇದ್ದಂತೆ ಎಂದಿದ್ದಾರೆ. "ಅಂದ ಚಂದ ಇಲ್ಲದ ಗಂಡ ಮಂಚದ ತುಂಬಾ

ಇದ್ದಂತೆ" ಎಂದು ಅನ್ನುವುದರಲ್ಲಿ ಹೆಸರು, ರೂಪ ಇಲ್ಲದ ದೇವರು ವಿಶ್ವವೆಲ್ಲಾ ವ್ಯಾಪಿಸಿದ್ದಾನೆಂದು ತಿಳಿಯುತ್ತಿದೆ.

**ಅಂದ, ಚಂದ ಇಲ್ಲದ = ರೂಪ, ಹೆಸರಿಲ್ಲದ**

**ಗಂಡ = ಭರಿಸುವ ದೇವರು**

**ಮಂಚದ ತುಂಬಾ ಇರುವಂತೆ = ವಿಶ್ವವೆಲ್ಲಾ ವ್ಯಾಪಿಸಿದ್ದಾನೆ.**

## 10. ಎಲ್ಲಾ ಇವೆ ಆದರೆ ಐದನೆತನ ಇಲ್ಲ.

ಒಂದು ಚಿಕ್ಕ ಊರಿನಲ್ಲಿ ಪ್ರಾಥಮಿಕ ಪಾಠಶಾಲೆ ಇತ್ತು. ಪ್ರಾಥಮಿಕ ಪಾಠಶಾಲೆಯಲ್ಲಿ ಒಟ್ಟು ಐದು ತರಗತಿಗಳು ಇರುವಾಗ, ಪಾಠಗಳನ್ನು ಬೋಧಿಸುವ ಬೋಧಕನು (ಟೀಚರ್) ಒಬ್ಬನೇ ಒಬ್ಬನಿದ್ದನು. ಆ ಒಬ್ಬನು ಎಷ್ಟು ಹೇಳಿದರೂ ನಾಲ್ಕು ತರಗತಿಗಳ ವರೆಗು ಓದು ಹೇಳುವುದಕ್ಕೇ ಕಾಲ ಸರಿಹೋಗುತ್ತಿತ್ತು. ಐದನೇ ತರಗತಿ ಮಕ್ಕಳು ಇಲ್ಲದಿರುವುದರಿಂದ ನಾಲ್ಕು ವರ್ಷಗಳು ಯಾವ ತೊಂದರೆ ಇಲ್ಲದಂತೆ ಕಳೆದುಹೋಗಿದೆ. ನಾಲ್ಕನೆ ವರ್ಷ ನಾಲ್ಕನೆ ತರಗತಿ ಪಾಸಾದ ವಿದ್ಯಾರ್ಥಿಗಳು ಐದನೆ ತರಗತಿಯಲ್ಲಿ ಕುಳಿತುಕೊಂಡರೂ, ಅವರಿಗೆ ಆ ತರಗತಿಯಲ್ಲಿ ವಿದ್ಯೆ ಹೇಳುವವರು ಇಲ್ಲದಿರುವುದರಿಂದ, ಐದನೆ ತರಗತಿ ಮಕ್ಕಳು ಕೂಡಾ ನಾಲ್ಕನೆ ತರಗತಿಯಲ್ಲಿಯೇ ಕುಳಿತುಕೊಳ್ಳಬೇಕಾಗಿ ಬಂದಿದೆ. ಐದನೆ ತರಗತಿ ಇದ್ದರೂ, ಐದನೆ ತರಗತಿಗೆ ಪಾಠ ಹೇಳುವ ಬೋಧಕನು ಇಲ್ಲದಹಾಗೆ, ಒಬ್ಬ ಸ್ತ್ರೀಗೆ ತನಗೆ ಪ್ರತ್ಯೇಕವಾದ ಪತಿ ಇಲ್ಲದೆ ಅಕ್ಕ ಗಂಡನನ್ನೇ ತನ್ನ ಗಂಡನನ್ನಾಗಿ ಹೇಳಿಕೊಳ್ಳಬೇಕಾಗಿ ಬಂದಿದೆ. ಪ್ರಾಥಮಿಕ ವಿದ್ಯಾರ್ಥಿಗಳಿಗೆ ಐದನೆ ತರಗತಿ ಇದ್ದರೂ ಬೋಧಿಸುವ ಟೀಚರ್ ಇಲ್ಲದಿರುವುದರಿಂದ ನಾಲ್ಕನೆ ತರಗತಿಯಲ್ಲಿಯೇ ಕುಳಿತುಕೊಂಡಂತೆ ಐದನೇ ತನವಾದ ಪ್ರತ್ಯೇಕ ಪತಿ ಇಲ್ಲದೇ ಅಕ್ಕ ಗಂಡನನ್ನೇ ತನ್ನ ಗಂಡನನ್ನಾಗಿ ಹೇಳಿಕೊಂಡಂತೆ ಒಬ್ಬ ಮನುಷ್ಯನಿಗೆ ನಾಲ್ಕು ಪೋಷಕ ಪದಾರ್ಥಗಳೊಂದಿಗೆ ಕೂಡಿಕೊಂಡ ಆಹಾರ ಇದ್ದರೂ ಮುಖ್ಯವಾದ ಐದನೆಯದಾದ ಜೀರ್ಣಕ್ರಿಯೆ ಇಲ್ಲದಹಾಗೆ ಮನುಷ್ಯನಿಗೆ ಎಲ್ಲಾ ಇದ್ದರೂ ಐದನೆತನ ಇಲ್ಲವೆಂದು ಈ ಗಾದೆಯಲ್ಲಿ ಹೇಳುವುದಾಗಿದೆ.

ಪ್ರಾಥಮಿಕ ಪಾಠಶಾಲೆಯಲ್ಲಿ ಕೊನೆಯದು, ದೊಡ್ಡದು, ಅಲ್ಲಿಗೆ ಪೂರ್ತಿ ಮುಗಿದುಹೋಗುವುದು ಐದನೆ ತರಗತಿ. ಆದರೇ ನಾಲ್ಕು ತರಗತಿಗಳು, ಅದರಲ್ಲಿ ಓದುಗಳಿದ್ದರೂ ಐದನೆ ತರಗತಿಯಲ್ಲಿ ಬೋಧಕನೂ ಇಲ್ಲವಂತೆ, ಓದೂ ಇಲ್ಲವಂತೆ. ಹಾಗೆಯೇ ಸ್ತ್ರೀಗೆ ವಯಸ್ಸು ಬಂದ ನಂತರ ಸ್ವಂತ ಪುರುಷನು ಇಲ್ಲದಂತೆ, ಪೋಷಕ ಪದಾರ್ಥಗಳಿದ್ದರೂ ಜೀರ್ಣಕ್ರಿಯೆ ಇಲ್ಲದಿದ್ದರೆ ಹೇಗಿರುತ್ತದೆಂದರೇ! ಐದನೆ ತರಗತಿ ಓದು ಇಲ್ಲದಿದ್ದರೆ ನಂತರ ಐದನೆ ತರಗತಿ ವಿದ್ಯಾರ್ಥಿ ಎನ್ನುವ ಹೆಸರು ಅವನಿಗೆ ಇಲ್ಲದಂತೆ ಹೋಗುತ್ತಿದೆ. ಹಾಗೆಯೇ ಯುಕ್ತವಯಸ್ಸು ಬಂದ ಸ್ತ್ರೀಗೆ ಪತಿ ಇಲ್ಲದಿದ್ದರೆ, ಆಕೆಗೆ ಸಂಸಾರಿ ಎನ್ನುವ ಹೆಸರು ಇಲ್ಲದಂತೆ ಹೋಗುತ್ತದೆ. ಹಾಗೆಯೇ ಪೋಷಕ ಪದಾರ್ಥಗಳಿದ್ದು ಬಲವಾದ ಆಹಾರವಿದ್ದರೂ, ಜೀರ್ಣಕ್ರಿಯೆ ಇಲ್ಲದಿದ್ದರೆ, ಅವನಿಗೆ ಆರೋಗ್ಯ ವಂತನೆನ್ನುವ ಹೆಸರು ಇಲ್ಲದಂತೆ ಹೋಗುತ್ತದೆ. ಹಾಗೆಯೇ ಮನುಷ್ಯನಲ್ಲಿನ ಜೀವಿಯು, ತಾಮಸ, ರಾಜಸ, ಸಾತ್ತ್ವಿಕ, ಯೋಗ ಎನ್ನುವ ನಾಲ್ಕು ಸ್ಥಾನಗಳನ್ನು ದಾಟಿಬಂದು, ಐದನೆಯದರೊಳಗೆ ಯೋಗ್ಯನಾದವನು, ಅದರಲ್ಲಿ ಅವನು ಅನುಭವಿಸುವುದು ಏನು ಇಲ್ಲ. ನಾಲ್ಕು ಸ್ಥಾನಗಳಲ್ಲಿ ಯಾವುದೋ ಒಂದು ಅನುಭವಿಸಿದ ಜೀವಿಯು, ಐದನೆಸ್ಥಾನವಾದ ಮುಕ್ತಿ ಎನ್ನುವ ಸ್ಥಾನದಲ್ಲಿ ಅನುಭವಿಸುವುದು ಏನುಯಿಲ್ಲದೆ, ಏನು ಅಲ್ಲದವನಾಗಿಹೋಗುತ್ತಿದ್ದಾನೆ. ಮೊದಲು ನಾಲ್ಕು ಸ್ಥಾನಗಳನ್ನು ಅನುಭವಿಸಿದ ಜೀವಿಗೆ, ಆಯಾ ಸ್ಥಾನಗಳ ಅನುಭವ ಗಳನ್ನನುಸರಿಸಿ ತಾಮಸನು, ರಾಜಸನು, ಸಾತ್ವಿ‌ಕನು, ಯೋಗಿ ಎನ್ನುವ ಹೆಸರುಗಳು ಬಂದರೂ, ಐದನೆ ಸ್ಥಾನಕ್ಕೆ ಹೋದವನಿಗೆ ಯಾವ ಹೆಸರೂ ಇಲ್ಲದೇ ಹೋಗುತ್ತಿದೆ. ಆದ್ದರಿಂದ "ಎಲ್ಲಾ ಇದ್ದರೂ ಐದನೆತನವಿಲ್ಲ" ಎಂದು ನಮ್ಮ ಜ್ಞಾನಿಗಳು ಗಾದೆಯನ್ನು ಹೇಳಿದ್ದಾರೆ. ಐದನೆತನ ಸ್ತ್ರೀಗೆ ಪತಿಯಾದಂತೆ, ಮನುಷ್ಯನಿಗೆ ಮೋಕ್ಷವಾಗುತ್ತಿದೆ. ನಾಲ್ಕು ಸ್ಥಾನಗಳಿಗು ಹೆಸರುಗಳಿವೆ, ಅದರಲ್ಲಿರುವವನಿಗೆ ಆ ಸ್ಥಾನಗಳ ಹೆಸರುಗಳು ಬರುತ್ತಿವೆ. ಆದರೇ ಐದನೆ ಸ್ಥಾನ ದೈವ ಆಗುವುದರಿಂದ ಅದಕ್ಕೆ ಹೆಸರಿಲ್ಲ. ಆ ಸ್ಥಾನವನ್ನು ಹೊಂದಿದವನಿಗೆ ಹೆಸರಿಲ್ಲ. ಆದ್ದರಿಂದ ಆ ವಿಷಯವನ್ನು ತಿಳಿಸುವ ನಿಮಿತ್ತ, ಹಿರಿಯರು ಅದಕ್ಕೆ ಸರಿಯಾದ ಅರ್ಥವನ್ನು ಕೊಡುವ ಸಲುವಾಗಿ "ಎಲ್ಲಾ ಇವೆ ಆದರೆ, ಐದನೆತನವಿಲ್ಲ" ಎಂದಿದ್ದಾರೆ.

## 11. ಅಮ್ಮ ಒಳ್ಳೆಯವಳೇ ಆದರೆ, ತೆಡ್ಡು ಒಳ್ಳೆಯದಲ್ಲ

ದೇವರು ವಿಶ್ವವನ್ನು ಸೃಷ್ಠಿಸಿದಾಗಲೇ ಮೊದಲು ಪ್ರಕೃತಿಯನ್ನು ಸೃಷ್ಠಿಸಿದ್ದಾನೆ. ನಂತರ ಮೂರು ಆತ್ಮಗಳೊಂದಿಗೆ ಕೂಡಿಕೊಂಡ ಜಗತಿಯನ್ನು ಸೃಷ್ಠಿಸಿದ್ದಾನೆ. ಜನ್ಮಿಸುವುದಕ್ಕೆ ಗುರುತಾಗಿ "ಜ" ಎಂದು. ಗತಿಸು (ಮರಣಿಸು) ವುದಕ್ಕೆ ಗುರುತಾಗಿ "ಗತಿ" ಎಂದು ಹೇಳುತ್ತಾ, ಜನನ ಮರಣಗಳು ಇರುವ ಜೀವರಾಶಿಗಳನ್ನು "ಜಗತಿ" ಎಂದು ಕರೆಯುವುದು ನಡೆದಿದೆ. ಮೊದಲು ಸೃಷ್ಠಿಸಲ್ಪಟ್ಟ ಪ್ರಕೃತಿಯಿಂದ ಗುಣಗಳಿಂದ ಕೂಡಿಕೊಂಡ ಮಾಯೆಯನ್ನು ದೇವರು ತಯಾರು ಮಾಡಿದ್ದಾನೆ. ಈ ವಿಷಯವನ್ನು ಭಗವದ್ಗೀತೆಯಲ್ಲಿ ಕ್ಷೇತ್ರ ಕ್ಷೇತ್ರಜ್ಞ ವಿಭಾಗ ಯೋಗದಲ್ಲಿ 20ನೇ ಶ್ಲೋಕದಲ್ಲಿ ಹೇಳಿದ್ದಾರೆ.

**ಶ್ಲೋ॥ ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ।**
**ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿ ಸಮ್ಭವಾನ್ ॥**

**ಭಾವಾರ್ಥ :–** ಪುರುಷನಾದ ದೇವರು, ಸ್ತ್ರೀ ಸ್ವರೂಪವಾದ ಪ್ರಕೃತಿ, ಎರಡ ರೊಂದರ ಜನ್ಮ ಯಾವಾಗ ನಡೆದಿದೆಯೋ ಯಾರಿಗೂ ತಿಳಿದಿಲ್ಲ. ವಿಕಾರಗಳನ್ನು ಉಂಟುಮಾಡುವ ಮಾಯರೂಪದಲ್ಲಿರುವ ಗುಣಗಳು, ಪ್ರಕೃತಿಯಿಂದ ಹುಟ್ಟಿರುವವೆಂದು ಹೇಳುತ್ತಿದ್ದೇನೆ. ಮೇಲಿನ ಶ್ಲೋಕದಲ್ಲಿ ಹೇಳಿದ ಸಮಾಚಾರ ವನ್ನನುಸರಿಸಿ ದೇವರು ಸೃಷ್ಠಿಯನ್ನು ತಯಾರು ಮಾಡಿದಾಗಲೇ, ಪ್ರಕೃತಿಯನ್ನು ಹುಟ್ಟಿಸಿದ್ದಾನೆಂದು ತಿಳಿಯುತ್ತಿದೆ. ಪ್ರಕೃತಿ ಹುಟ್ಟಿದ ನಂತರ, ಪ್ರಕೃತಿಯಿಂದ ಗುಣಗಳು ಹುಟ್ಟಿವೆಯೆಂದು ಕೂಡಾ ತಿಳಿಯುತ್ತಿವೆ. ಪ್ರಕೃತಿಯಿಂದ ಗುಣಗಳು ಹುಟ್ಟಿದಮುನ್ನವೇ, ಪ್ರಕೃತಿಯನ್ನು ತಾಯಿಯನ್ನಾಗಿ ಮಾಡಿ, ತಾನು ತಂದೆಯಾಗಿದ್ದು, ಸರ್ವಜೀವರಾಶಿಗಳನ್ನು ದೇವರು ಸೃಷ್ಠಿಸಿದ್ದಾನೆ. ಜೀವರಾಶಿ ಗಳನ್ನು ಸೃಷ್ಠಿಸದ ಮುನ್ನವೇ, ಪ್ರಕೃತಿಯನ್ನು ತಯಾರುಮಾಡುತ್ತಲೇ ಪ್ರಕೃತಿಯಲ್ಲಿನ ಸೂರ್ಯನಿಗೆ ತನ್ನ ಜ್ಞಾನವನ್ನು ತಿಳಿಸಿದ್ದಾನೆ. ಚೆನ್ನಾಗಿ ಅರ್ಥವಾಗುವಂತೆ ಹೇಳಿದರೆ ದೇವರು ಯಾವಾಗಲೂ ಇರುವವನೇ, ಹುಟ್ಟುವವನಲ್ಲ. ಎಂದಿಗೂ ಸರ್ವದಾ ಇರುವವನು ಪ್ರಕೃತಿಯನ್ನು ತಯಾರು ಮಾಡಿದಾಗ ಸೃಷ್ಠಿ ತಯಾರಾಗಿದೆಯೆಂದು ಹೇಳುತ್ತಿದ್ದೇವೆ. ಸೃಷ್ಠಿ ಆದಿಯಲ್ಲಿ ಮೊದಲು, ಪರಮಾತ್ಮನಿಂದ ಪ್ರಕೃತಿ ತಯಾರಾಗಿದ್ದು ನಂತರ, ಜೀವರಾಶಿಗಳು ಸೃಷ್ಠಿಸಲ್ಪಟ್ಟಿವೆ.

ಜೀವಿಗಳು ತಯಾರಾದ ನಂತರ ಪ್ರಕೃತಿಯಿಂದ ಗುಣಗಳು ಹುಟ್ಟಿವೆ. ಆಗ ದೇವರಿಂದ ಜ್ಞಾನ ಕೂಡಾ ಹುಟ್ಟಿದೆ.

ಪರಮಾತ್ಮ ಸರ್ವಜೀವರಾಶಿಗಳಿಗು ತಂದೆಯಾಗಿದ್ದು, ಪ್ರಕೃತಿ ತಾಯಿಯಾಗಿ ಇದೆ. ಪ್ರಕೃತಿಯಿಂದ ಪ್ರಕೃತಿಗೆ ಬೇರೆರೂಪವಾಗಿ ಬಂದಿರುವ ಮಾಯೆಯನ್ನು ಬದಲು ತಾಯಿಯಾಗಿ ಲೆಕ್ಕಿಸಬಹುದು. ದೇವರಿಂದ ಹುಟ್ಟಿದ ಜ್ಞಾನವನ್ನು ಅಮ್ಮನ ತಮ್ಮನಾಗಿ, ಸೋದರಮಾವನಾಗಿ ಗುರುತಿಸಬಹುದು. ಪ್ರಕೃತಿ ತಾಯಿಯಾಗಿ, ಪ್ರಕೃತಿಗೆ ಬದಲು ರೂಪವಾದ ಮಾಯೆಯನ್ನು ಕೂಡಾ ಮತ್ತೊಂದು ತಾಯಿಯಾಗಿ ಭಾವಿಸಿ, ಮಾಯೆ ಮಾತೆ ಎಂದು ಕರೆಯುತ್ತಿದ್ದೇವೆ. ಪರಮಾತ್ಮ ಎನ್ನುವ ತಂದೆ, ತನ್ನ ಸಂತಾನವನ್ನು ಕುರಿತು ಸ್ವಲ್ಪವೂ ಹಿಡಿಸಿ ಕೊಳ್ಳುವುದಿಲ್ಲ. ಸಂತಾನವೊಂದರ ಅವಶ್ಯಕತೆಗಳೆಲ್ಲವನ್ನು, ಪೋಷಣೆ ಯೆಲ್ಲವನ್ನು ತಾಯಿಯಾದ ಪ್ರಕೃತಿಯೇ ನೋಡಿಕೊಳ್ಳುತ್ತಿರುತ್ತಾಳೆ. ಪ್ರಕೃತಿ ಜೀವರಾಶಿಗಳನ್ನು ಪ್ರೇಮದಿಂದ ಬೆಳೆಸುವುದು, ಕೋಪದಿಂದ ದಂಡಿಸುವು ದಾಗಿರುತ್ತದೆ. ಕೋಪದಿಂದ ದಂಡಿಸುವಾಗ ದಂಡವನ್ನು (ಕಟ್ಟಿಗೆಯನ್ನು) ತೆಗೆದುಕೊಂಡು ದಂಡಿಸುತ್ತದೆ ಅಲ್ಲವೇ! ಗುಣಮಯವಾದ ಮಾಯೆಯೇ, ಪ್ರಕೃತಿ ಕೈಯಲ್ಲಿನ ಕೋಲಿನಂತೆ ಇದೆಯೆಂದು ತಿಳಿಯಬೇಕು. ಜೀವಿಗಳಿಗೆ ಪ್ರಕೃತಿ ಪ್ರೇಮದಿಂದಿರುವ ತಾಯಿಯಾಗಿದ್ದರೂ, ಜೀವಿಗಳನ್ನು ದಂಡಿಸುವಾಗ ಕೋಲಾಗಿ (ದಂಡವಾಗಿ) ಇದೆಯೆಂದು ಹೇಳಬಹುದು. ದಂಡವನ್ನು ಅಥವಾ ಕೋಲನ್ನು ತೆಡ್ಡು ಎಂದು ಕೂಡಾ ಹೇಳಬಹುದು. ಅಮ್ಮ ಒಳ್ಳೆಯವಳೇ ಆದರೂ, ಅಮ್ಮ ದಂಡಿಸುವಾಗ ಕೋಲಿನಿಂದ ನೋವು, ಬಾಧೆ ಉಂಟಾಗುತ್ತಿದೆ. ಆದ್ದರಿಂದ "ಅಮ್ಮ ಒಳ್ಳೆಯವಳೇ ಆದರೆ ತೆಡ್ಡು ಒಳ್ಳೆಯದಲ್ಲ" ಎನ್ನುವ ಗಾದೆಯನ್ನು ಹಿರಿಯರು ಹೇಳಿದ್ದಾರೆ. ಈ ಗಾದೆಯನ್ನು ತಿಳಿಯುವುದಕ್ಕೆ, ಪ್ರಕೃತಿ ಪರಮಾತ್ಮರಿಂದ. ಸೃಷ್ಟಿ ಪರಂಪರೆಗಳವರೆಗು ತಿಳಿಯಬೇಕಾಗಿರುತ್ತದೆ. ಪ್ರಕೃತಿ ಮನುಷ್ಯ ಬಳಿ ಎರಡು ವಿಧಗಳಾಗಿ ಇದೆಯೆಂದು, ಮಹಾ ಬಲ ಉಂಟಾದ ಮಾಯೆ ಕೂಡಾ ಪ್ರಕೃತಿಗೆ ಮಾರು ಹೆಸರಾದ ಗುಣಗಳೆಂದು, ಅವುಗಳೇ ಮಾನವನನ್ನು ಕಠಿಣವಾಗಿ ಶಿಕ್ಷಿಸುವ ದಂಡವಾಗಿ ಇವೆಯೆಂದು ತಿಳಿದಾಗ, ಈ ಗಾದೆಯೊಳಗಿನ ಗೂಢಾರ್ಥ ತಿಳಿಯುತ್ತದೆ.

## 12. ಹೆಚ್ಚಾಗಿ ಹೇಳಿಕೊಂಡರೆ ಬ್ರಹ್ಮಹತ್ಯೆ. ಕಡಿಮೆ ಹೇಳಿಕೊಂಡರೆ ಹತ್ಯೆ ವಿವರಿಸಿ ಹೇಳಿಕೊಂಡರೆ ಸಂಬಂಧವೇ ಇಲ್ಲ.

ಎಲ್ಲಿಯಾದರೂ ಒಂದು ಹತ್ಯೆ ನಡೆದರೆ ಹತ್ಯೆ ಮಾಡಿದವನು ತಾನು ಹತ್ಯೆ ಮಾಡಿದ್ದೇನೆಂದು ಕೆಲವರಿಗೆ ಹೇಳಿಕೊಳ್ಳುವುದು ನಡೆಯುತ್ತಿದೆ. ಹಾಗೆ ಹೇಳಿಕೊಳ್ಳುವುದಕ್ಕೆ ಕಾರಣವೇನೆಂದರೇ! ತಾನು ಹಂತಕನೆಂದು ಇತರರಿಗೆ ತಿಳಿಯುವುದರಿಂದ ಅವರು ತನ್ನನ್ನು ನೋಡಿ ಭಯಪಡುತ್ತಾರೆಂದು, ಹಾಗೆ ಭಯಪಡುವುದರಿಂದ, ಇತರರಿಂದ ತನಗೆ ಯಾವ ತೊಂದರೆ ಇಲ್ಲದೆ ಇರುವುದಲ್ಲದೆ, ತಾನು ಹೇಳಿದ ಮಾತಿಗೆ ಯಾರೂ ಎದುರಾಡುವುದಿಲ್ಲವೆಂದು, ಅದರಿಂದ ಇತರರ ಮೇಲೆ ತನ್ನ ದೊಡ್ಡಸ್ತಿಕೆಯನ್ನು ಚಲಾಯಿಸಬಹುದೆಂದು ಅಂದುಕೊಂಡು, ತಾನು ಹಂತಕನೆಂದು ಹೇಳಿಕೊಳ್ಳುತ್ತಿರುತ್ತಾರೆ. ಹೇಳುವುದರಲ್ಲಿ ಕೆಲವರು ನಡೆದಿರುವುದು ನಡೆದಂತೆ ಹೇಳಿದಾಗ, ಕೆಲವರು ನಡೆದಿರುವುದಕ್ಕಿಂತ ಇನ್ನೂ ಹೆಚ್ಚಾಗಿ ಹೇಳುತ್ತಿರುತ್ತಾರೆ. ಹತ್ಯೆ ನಡೆದಿರುವುದು ವಾಸ್ತವವೇ ಆದರೂ, ಅಲ್ಲಿ ನಡೆದ ಸಂಘಟನೆಯನ್ನು ಹೆಚ್ಚಾಗಿ ವರ್ಣಿಸಿ ಹೇಳುವವರು ಬಹಳಜನ ಇದ್ದಾರೆ. ಹಾಗೆ ಹೇಳುವುದರಿಂದ ತಮ್ಮ ಗೌರವ, ಮರ್ಯಾದೆ ಹೆಚ್ಚಾಗುತ್ತದೆಂದು ಅಂದುಕೊಳ್ಳುವುದು ನಡೆಯುತ್ತಿದೆ. ನಡೆದಿರುವುದು ಸಾಧಾರಣ ಹತ್ಯೆ ಆದರೂ ದೊಡ್ಡದಾಗಿ ವರ್ಣಿಸಿ ಹೇಳುವುದರಿಂದ ದೊಡ್ಡ ಹತ್ಯೆಯಾಗಿ ಲೆಕ್ಕಿಸಲ್ಪಡುತ್ತಿದೆ. ಹಂತಕನ ಶರೀರದಲ್ಲಿನ ಅಹಮ್, ನಡೆದ ಕಾರ್ಯವನ್ನು ಎಷ್ಟು ದೊಡ್ಡದಾಗಿ ವರ್ಣಿಸಿದರೇ ಅಷ್ಟು ದೊಡ್ಡ ಕರ್ಮ ಸಂಭವಿಸುತ್ತದೆ. ಆದ್ದರಿಂದ ದೊಡ್ಡದಾಗಿ ವರ್ಣಿಸಿ ಹೇಳಿದ ಹತ್ಯೆ, ದೊಡ್ಡ ಹತ್ಯೆಯಾಗಿ (ಬ್ರಹ್ಮಹತ್ಯೆಯಾಗಿ) ಲೆಕ್ಕಿಸಲ್ಪಡುತ್ತಿದೆ. ಆದ್ದರಿಂದ ಗಾದೆಯಲ್ಲಿ ಹೆಚ್ಚಾಗಿ ಹೇಳಿಕೊಂಡರೆ ಬ್ರಹ್ಮಹತ್ಯೆ ಎಂದಿದ್ದಾರೆ. ನಡೆದಿರುವುದಕ್ಕಿಂತ ಕಡಿಮೆ ಮಾಡಿ ಹೇಳಿದರೇ, ಅದರಿಂದ ಕಡಿಮೆ ಹತ್ಯೆಯಾಗಿ ಲೆಕ್ಕಿಸಲ್ಪಟ್ಟು, ಕಡಿಮೆ ಪಾಪ ಬರುತ್ತದೆ. ಆದ್ದರಿಂದ ಕಡಿಮೆ ಹೇಳಿಕೊಂಡರೆ ಹತ್ಯೆ ಎಂದು ಕರೆದಿದ್ದಾರೆ. ಒಂದೇ ಹತ್ಯೆಯನ್ನು ಹೆಚ್ಚಾಗಿ ಹೇಳುವುದು, ಕಡಿಮೆಯಾಗಿ ಹೇಳುವುದರಿಂದ, ಅವನ ಅಹಂಕಾರವನ್ನು ಅನುಸರಿಸಿ ಹೆಚ್ಚು ಕಡಿಮೆ ಪಾಪ ಬರುತ್ತಿದೆಯೆಂದು ತಿಳಿಯುತ್ತಿದೆ.

ಈ ವಿಧವಾಗಿ ತಾನು ಮಾಡಿದ ಹತ್ಯೆಯನ್ನು ಮನುಷ್ಯ ಎರಡು ವಿಧಗಳಾಗಿ ಹೇಳಿಕೊಳ್ಳುವುದು ತಿಳಿದಿದೆ ಅಲ್ಲವೆ! ಒಂದುವೇಳೆ ಹತ್ಯೆ ಮಾಡಿದವನು

ಸಾಧಾರಣ ವ್ಯಕ್ತಿ ಅಲ್ಲದೇ, ದೈವಜ್ಞಾನವನ್ನು ತಿಳಿದ ವ್ಯಕ್ತಿಯಾಗಿದ್ದರೆ, ಅವನು ತಾನು ಮಾಡಿದ ಹತ್ಯೆಯನ್ನು ಕುರಿತು, ಇತರರಿಗೆ ಹೆಚ್ಚಾಗಿ ಹೇಳುವುದಿಲ್ಲ ಮತ್ತು ಕಡಿಮೆ ಹೇಳುವುದಿಲ್ಲ. ತನ್ನಷ್ಟಕ್ಕೆ ತಾನು ಆ ಕಾರ್ಯವನ್ನು ಕುರಿತು ವಿವರಿಸಿಕೊಂಡು ನೋಡುತ್ತಾನೆ. ತನಗೆ ತಿಳಿದ ಜ್ಞಾನದ ಪ್ರಕಾರ, ಜೀವಿಯು ಶರೀರದಲ್ಲಿ ತಲೆಯಲ್ಲಿ ಒಂದುಕಡೆ ಏನು ಮಾಡದೆ ಇರುತ್ತಾನೆ. ಜೀವಿಯು ಸ್ವತಃವಾಗಿ ನೋಡಲಾರನು, ಸ್ವತಃವಾಗಿ ಕೇಳಲಾರನು, ಹಾಗೆಯೇ ಸ್ವತಃವಾಗಿ ಯಾವ ಕೆಲಸ ಮಾಡಲಾರದೆ, ತನಗೆ ಲಭಿಸಿರುವುದನ್ನು ಮಾತ್ರ ಅನುಭವಿಸುತ್ತಿರುತ್ತಾನೆ. ಇದು ಬೇಡ, ಇದು ಬೇಕೆನ್ನುವುದು ಕೂಡಾ ಜೀವಿಗೆ ಸಲ್ಲುವುದಿಲ್ಲ. ಯಾವ ಅನುಭವ ತನ್ನವರೆಗು ಬಂದರೆ, ಅದನ್ನು ಅನುಭವಿಸುವುದು ಮಾತ್ರ ಜೀವಿಯ ಕೆಲಸವಾಗಿದೆ. ಕುದುರೆ ಕುರುಡದ್ದು, ಕುಂಟದ್ದಾಗಿರುವಾಗ ಅದು ಎಲ್ಲಿಗೂ ಹೋಗಲಾರದು, ಏನು ಮಾಡಲಾರದು. ಆದ್ದರಿಂದ ಅದಕ್ಕೆ ಮೆತ್ತನೆಯ ಗುಗ್ಗರಿಯನ್ನು ಇಟ್ಟರೂ, ಗಟ್ಟಿ ನುಚ್ಚು ಇಟ್ಟರೂ, ಹಸಿರು ಹುಲ್ಲು ಹಾಕಿದರೂ, ಒಣಹುಲ್ಲು ಹಾಕಿದರೂ ಸಮಯಕ್ಕೆ ಯಾವುದು ದೊರೆತರೆ ಅದನ್ನೇ ತಿನ್ನುವಂತೆ, ಜೀವಿಯು ಕೂಡಾ ತನ್ನವರೆಗು ಯಾವ ಅನುಭವ ಬಂದರೇ, ಅದನ್ನೇ ಅನುಭವಿಸಬೇಕಾಗಿದ್ದೇ. ಕಷ್ಟವಾದರೂ, ಸುಖವಾದರೂ, ದುಃಖವಾದರೂ, ಸಂತೋಷವಾದರೂ ತಪ್ಪದೆ ಅನುಭವಿಸಬೇಕಾಗಿದ್ದೇ.

ಜೀವಿಯು ತಾನು ಶರೀರದಲ್ಲಿ ಎಲ್ಲಿಗೂ ಹೋಗಲಾರದೆ, ಏನು ಮಾಡಲಾರದೆ ಯಾರ ಸಹಾಯದಿಂದಲೋ ಜೀವಿಸುತ್ತಾ, ಯಾವುದು ದೊರೆತರೆ ಅದನ್ನು ಮಾತ್ರ ಸ್ವೀಕರಿಸುವವನಾಗಿ ಇರುವಾಗ, ಎಲ್ಲಿಯೋ ಶರೀರದ ಹೊರಗೆ ನಡೆದ ಕಾರ್ಯಕ್ಕೆ ತಾನು ಹೇಗೆ ಜವಾಬ್ದಾರಿಯಾಗುತ್ತಾನೆ. ಶರೀರದ ಹೊರಗೆ ನಡೆದ ಹತ್ಯಾಕಾರ್ಯವನ್ನು ಯಾರೋ ಮಾಡಿದರೆ ಆ ಕಾರ್ಯಕ್ಕು, ಜೀವಿಗು ಯಾವ ಸಂಬಂಧವಿಲ್ಲ ಅಲ್ಲವೆ! ಶರೀರದಲ್ಲಿ ಅಂಗವಿಕಲನಾಗಿ ಜೀವಾತ್ಮನಿಗೆ ಶರೀರದೊಳಗೆ ನಡೆಯುವ ಯಾವ ಕಾರ್ಯದಿಂದಾಗಲಿ, ಶರೀರದ ಹೊರಗೆ ನಡೆಯುವ ಎಂತಹ ಕಾರ್ಯದೊಂದಿಗಾಗಲಿ ಯಾವುದೇ ಸಂಬಂಧವಿಲ್ಲ. ಹಾಗಿರುವಾಗ ಶರೀರದ ಹೊರಗೆ ನಡೆದ ಹತ್ಯೆವೊಂದರ ಪಾಪ, ಜೀವಿಗೆ ಅಂಟುವುದಿಲ್ಲ. ಅಷ್ಟೇಅಲ್ಲದೆ ಶರೀರದಲ್ಲಿನ ಜೀವಿಯು ಮಾತ್ರ ಹಂತಕನಲ್ಲ.

ಹೊರಗೆ ನಡೆದ ಹತ್ಯೆಯಲ್ಲಿ ಜೀವಿಯು ಪಾಲ್ಗೊಳ್ಳುವುದಕ್ಕೆ ಅವಕಾಶವೇ ಇಲ್ಲ. ಯಾವ ಕೆಲಸ ಕೈಲಾಗದ ಅಂಗವಿಕಲನಾದ ಜೀವಿಯು, ಶರೀರದೊಳಗೇ ಎಲ್ಲಾ ಕೆಲಸಗಳಿಗೂ ಅಯೋಗ್ಯನಾಗಿರುವಾಗ, ಹೊರಗಿನ ಕೆಲಸಕ್ಕೆ ಹೇಗೆ ಯೋಗ್ಯನಾಗುತ್ತಾನೆ. ಇದನ್ನನುಸರಿಸಿ ನಡೆದ ಹತ್ಯೆಯಲ್ಲಿ ಜೀವಿಯ ಪ್ರಮೇಯ ವೇನು ಇಲ್ಲ, ಜೀವಿಯು ಹಂತಕನಲ್ಲ ಎನ್ನುವುದು ಸತ್ಯವಾಗಿದ್ದು, ಲೋಕವೆಲ್ಲ ಜೀವಿಯು ಹಂತಕನೆಂದು ಅಂದುಕೊಳ್ಳುತ್ತಿದೆ. ಅಷ್ಟೇಅಲ್ಲದೆ ಸ್ವತಃವಾಗಿ ಜೀವಿಯೇ ತಾನು ಹತ್ಯೆ ಮಾಡಿದ್ದೇನೆಂದು, ಹಂತಕನೆಂದು ಹೇಳಿಕೊಳ್ಳುತ್ತಿದ್ದಾನೆ. ಜೀವಿಯು ಏನು ಮಾಡಲಾರದ ಸ್ಥಿತಿಯಲ್ಲಿದ್ದು, ತಾನು ಮಾಡದ ಕೆಲಸ ಮಾಡಿದ್ದೇನೆಂದು ಏಕೆ ಹೇಳಿ ಕೊಳ್ಳುತ್ತಿದ್ದಾನೆ? ಎಂದು ಪ್ರಶ್ನಿಸಿಕೊಂಡು ನೋಡಿದರೆ ಹೀಗೆ ತಿಳಿಯುತ್ತಿದೆ.

ನಿಮಗೆ ಅರ್ಥವಾಗುವುದಕ್ಕೆ ಒಂದು ಉದಾಹರಣೆಯನ್ನು ನೋಡೋಣ. ಮೂರ್ತಿ ಎನ್ನುವಾತನು, ಮಧ್ಯಾಹ್ನದ ಊಟಮಾಡಿ, ವಿಶ್ರಾಂತಿಗಾಗಿ ಮಲಗಿಕೊಂಡು ನಿದ್ರೆಯೊಳಗೆ ಜಾರಿಕೊಂಡಿದ್ದಾನೆ. ಆಗ ಸ್ವಪ್ನ ಬಂದಿದೆ. ಆ ಸ್ವಪ್ನದಲ್ಲಿ ಆತನು ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದಾನೆ. ನಂತರ ಸ್ಟೇಷನ್‌ನಲ್ಲಿ ತನ್ನ ಸೂಟ್‌ಕೇಸ್ ತೆಗೆದುಕೊಂಡು ಇಳಿದಿದ್ದಾನೆ. ತಾನು ರಾಮನ ಭಕ್ತನಾಗಿರುವುದರಿಂದ ತನ್ನ ಸೂಟ್‌ಕೇಸ್ ಮೇಲೆ ಶ್ರೀರಾಮ ಎನ್ನುವ ಹೆಸರನ್ನು ದೊಡ್ಡದಾಗಿ ಬರೆದುಕೊಂಡಿದ್ದಾನೆ. ಸ್ವಪ್ನದಲ್ಲಿ ನಡೆಯುವ ಸಂಘಟನೆಗಳು ವೇಗವಾಗಿ ನಡೆಯುವುದಲ್ಲದೇ, ಸ್ಪಷ್ಟವಾಗಿ ಇರುವುದಿಲ್ಲ. ಮತ್ತು ವಿವೇಕವಾಗಿರುವುದಿಲ್ಲ. ರೈಲ್ವೇ ಸ್ಟೇಷನ್‌ನಲ್ಲಿ ಇಳಿದವನು, ತನ್ನ ಮನೆಪಕ್ಕದ ಬೀದಿಯಲ್ಲಿ ಹೋಗುತ್ತಿರುವಾಗ ತನ್ನ ಸೂಟ್‌ಕೇಸ್‌ನನ್ನು ಯಾರೋ ಕಸಿದುಕೊಂಡು ಹೋಗಿದ್ದಾರೆ. ಹಾಗೆ ತನ್ನ ಸೂಟ್‌ಕೇಸ್‌ನ್ನು ಕಳ್ಳನು ಕಸಿದು ಕೊಂಡು ಹೋಗುತ್ತಲೇ, ತನ್ನ ಸೂಟ್‌ಕೇಸ್ ಹೋಗಿದೆಯೆನ್ನುವ ಭಯದಿಂದ ಕೂಡಲೇ ನಿದ್ರೆಯಿಂದ ಎದ್ದೇಳುವುದು ನಡೆದಿದೆ. ನಿದ್ರೆಯಿಂದ ಎಚ್ಚರವಾಗುತ್ತಲೇ ಸ್ವಪ್ನದಲ್ಲಿ ನಡೆದ ಸಂಘಟನೆಗು ತನ್ನ ಸೂಟ್‌ಕೇಸ್ ಹೋಗಿರುವುದಕ್ಕು ಸ್ವಲ್ಪ ಭಯಪಡುವುದು ನಡೆದಿದೆ. ಆ ಭಯ, ಎಚ್ಚರಬಂದ ನಂತರ ಕೂಡಾ ಸ್ವಲ್ಪ ಆತನಿಗಿರುವುದು ನಡೆದಿದೆ. ಹಾಗೆ ಎದ್ದವನಿಗೆ ಅದು ಎಲ್ಲವೂ ಸ್ವಪ್ನವೆಂದು

ತಿಳಿದು ಭಯದಿಂದ ಚೇತರಿಸಿಕೊಂಡು ಸಾಧಾರಣವಾಗಿ ಆಗಿಹೋಗಿದ್ದಾನೆ. ನಂತರ ಕೂಡಲೇ ಮೂರ್ತಿ ಮನೆಯನ್ನು ಬಿಟ್ಟು ಬಜಾರಿಗೆ ಹೋಗುವುದು ನಡೆದಿದೆ. ಅಲ್ಲಿ ಗುಂಪಾಗಿ ಜನರಿರುವಾಗ ಅಲ್ಲಿಗೆ ಹೋಗಿ ನೋಡಿದ್ದಾನೆ. ಅಲ್ಲಿ ಪೊಲೀಸ್‌ರು ಒಬ್ಬ ಕಳ್ಳನನ್ನು ಹಿಡಿದುಕೊಂಡು, ಅವನಿಂದ ಒಂದು ಸೂಟ್‌ಕೇಸ್‌ನನ್ನು ಕಸಿದುಕೊಂಡು “ಇದು ಯಾರದು ಎಲ್ಲಿ ಕಳ್ಳತನ ಮಾಡಿದ್ದೀಯಾ” ಎಂದು ಪ್ರಶ್ನಿಸುತ್ತಿದ್ದರು. ಅಲ್ಲಿಗೆ ಹೋದ ಮೂರ್ತಿಗೆ, ಸ್ವಪ್ನದಲ್ಲಿ ನಡೆದ ದೃಶ್ಯ ಜ್ಞಾಪಕ ಬಂದಿದೆ. ಅಲ್ಲಿ ಕಳ್ಳನ ಹತ್ತಿರ ದೊರೆತ ಸೂಟ್‌ಕೇಸ್ ತನ್ನ ಸೂಟ್‌ಕೇಸ್‌ನಂತೇ ಇರುವುದು ನೋಡಿ ಕೂಡಲೇ ಇದು ನನ್ನದು ಎಂದು ಮೂರ್ತಿ ಅನ್ನುವುದು ನಡೆದಿದೆ. ಆಗ ಪೊಲೀಸರು ನಿನ್ನ ಸೂಟ್‌ಕೇಸ್‌ಗೆ ಏನಾದರೂ ಗುರುತು ಹೇಳಬಲ್ಲೆಯಾ ಎಂದು ಕೇಳಿದರು. ಆಗ ಆತನು ತನ್ನ ಸೂಟ್‌ಕೇಸ್ ಮೇಲೆ ಶ್ರೀರಾಮ ಎಂದು ಬರೆದಿದೆಯೆಂದು ಹೇಳಿದಾಗ, ಸೂಟ್‌ಕೇಸ್ ಕೆಳಭಾಗದಲ್ಲಿ ಆತನು ಹೇಳಿದಂತೆ ಇರುವುದು ನೋಡಿ, ಆ ಸೂಟ್‌ಕೇಸ್‌ನ್ನು ಮೂರ್ತಿಗೆ ಕೊಡುವುದು ನಡೆದಿದೆ. ಆಗ ಮೂರ್ತಿ, ಕನಸಿನಲ್ಲಿ ನಡೆದಿರುವುದು ನಿಜವಾಗಿದೆಯೆಂದು ಅಂದುಕೊಂಡಿದ್ದಾನೆ. ಮೂರ್ತಿಗೆ ಸೂಟ್‌ಕೇಸ್‌ನ್ನು ಕೊಟ್ಟ ಪೊಲೀಸ್‌ರು ಸೂಟ್‌ಕೇಸ್‌ನಲ್ಲಿ ಏನಿದೆಯೆಂದು ಕೇಳಿದ್ದಾರೆ. ಅದರಲ್ಲಿ ಏನಿರುವುದು ತಿಳಿಯದು ಆದ್ದರಿಂದ, ಆಗ ಮೂರ್ತಿ ಅವರ ಮಾತಿಗೆ ಸಮಾಧಾನ ಹೇಳಲಾರದೆ ಹೋಗಿದ್ದಾನೆ.

ಅಷ್ಟರಲ್ಲಿ ಅಲ್ಲಿಗೆ ಪೊಲೀಸ್ ಅಧಿಕಾರಿ ಬಂದು, ವಿಷಯವೆಲ್ಲ ತಿಳಿದುಕೊಂಡು ಸೂಟ್‌ಕೇಸ್ ನಿನ್ನದಾದರೂ ಅದರಲ್ಲಿ ಏನಿದೆಯೋ ತನಿಖೆ ಮಾಡಬೇಕೆಂದು ಹೇಳಿ ಅದನ್ನು ತೆರೆಸಿದ್ದಾನೆ. ಆಗ ಆ ಸೂಟ್‌ಕೇಸ್‌ನಲ್ಲಿ ಒಂದು ಕೇಜಿ ಗಾಂಜಾ ಪೊಟ್ಟಣಗಳು ದೊರೆತಿವೆ. ಆಗ ಪೊಲೀಸ್ ಅಧಿಕಾರಿ, ಮೂರ್ತಿ ಮೇಲೆ ಕೇಸ್ ಬರೆಯುವುದು ನಡೆದಿದೆ. ಆತನನ್ನು ಆರೆಸ್ಟು ಮಾಡುವುದು ಕೂಡಾ ನಡೆದಿದೆ. ವಾಸ್ತವಕ್ಕೆ ಆ ಸೂಟ್‌ಕೇಸ್ ಮೂರ್ತಿದಲ್ಲ. ಆದರೂ ಸ್ವಪ್ನದಲ್ಲಿ ಅದು ತನ್ನದೇ ಆಗಿರುವುದರಿಂದ ಮೂರ್ತಿ, ನನ್ನದು ಎಂದು ಹೇಳುವುದು ನಡೆದಿದೆ. ಒಂದು ಕಡೆ ಮೂರ್ತಿ ತನ್ನ ವಾದನೆ ಸರಿಯಾದುದೇ ಅಂದುಕೊಂಡರೂ, ಸ್ವಪ್ನದಲ್ಲಿ ಆತನಿಗೆ ಅದು ವಾಸ್ತವವೇ

ಆದರೆ, ಎಚ್ಚರದಲ್ಲಿ ಅದು ವಾಸ್ತವ ಅಲ್ಲವೆಂದು ಹೊರಗೆ ಗ್ರಹಿಸಲಾರದೆ ಹೋಗಿದ್ದಾನೆ. ಸ್ವಪ್ನದಲ್ಲಿ ಮೂರ್ತಿ ಇರುವುದು ವಾಸ್ತವವೇ, ಎಚ್ಚರದಲ್ಲಿ ಕೂಡಾ ಮೂರ್ತಿ ವಾಸ್ತವವೇ. ಆದರೇ ಸ್ವಪ್ನದಲ್ಲಿ ನಡೆದಿರುವುದು, ಎಚ್ಚರಕ್ಕೆ ಸಂಬಂಧವಿಲ್ಲವೆಂದು, ನಡೆಯದಂತೇ ಎಂದು ಗ್ರಹಿಸಲಾರದೆ ಹೋಗಿದ್ದಾನೆ. ಆದ್ದರಿಂದ ಮಾಡದ ಅಪರಾಧಕ್ಕೆ ಆತನು ಜವಾಬ್ದಾರಿ ಆಗಿದ್ದಾನೆ. ಈಗ ಅಸಲು ವಿಷಯಕ್ಕೆ ಬಂದು ಉದಾಹರಣೆಯನ್ನು ಹೋಲಿಸಿಕೊಂಡು ನೋಡೋಣ. ಸ್ವಪ್ನದಲ್ಲಿ ನಡೆದಿರುವುದೆಲ್ಲ ಮೂರ್ತಿಗೆ ತಿಳಿದಂತೆ, ಎಚ್ಚರದಲ್ಲಿ ನಡೆದಿರುವುದು ಕೂಡಾ ಜೀವಿಗೆ ತಿಳಿಯುತ್ತಿದೆ. ಸ್ವಪ್ನದಲ್ಲಿ ನಡೆದಿರುವವೆಲ್ಲ ಅಸತ್ಯವೇ ಆದರೂ ಜೀವಿಯ ಅನುಭವಕ್ಕೆ ಮಾತ್ರ ಸತ್ಯ. ಹಾಗೆಯೇ ಎಚ್ಚರದಲ್ಲಿ ನಡೆದಿರುವ ಹತ್ಯೆ ಜೀವಿಗೆ ಸಂಬಂಧವಿಲ್ಲದಿದ್ದರೂ, ತನ್ನ ಮುಂದೆಯೇ ನಡೆದಂತೆ ಬುದ್ಧಿ ತಿಳಿಸುವುದರಿಂದ, ಬುದ್ಧಿ ತೋರಿಸಿದ ಸಂಘಟನೆಯನ್ನು ನೀನೆ ಮಾಡಿದ್ದೀಯಾ ಎಂದು ಅಹಂ ಹೇಳುವುದರಿಂದ, ಅಹಂ ತಿಳಿಸಿದ ಭಾವನೆಯನ್ನು ಹೊಂದಿದ ಜೀವಿಯು ತನ್ನ ಸ್ಥಿತಿಯನ್ನು ತಾನು ಮರೆತು ಹೋಗಿ, ಅಹಂಭಾವವನ್ನು ಹೊಂದಿ, ನಡೆಯದ ಹತ್ಯೆಯನ್ನು ನಾನೇ ಮಾಡಿದ್ದೇನೆಂದು ಹೇಳಿಕೊಳ್ಳುವುದು ನಡೆದಿದೆ. ದೊರೆತ ಸೂಟ್‌ಕೇಸ್ ತನ್ನದೇಯೆಂದು ಮೂರ್ತಿ ಹೇಳಿದಂತೆ, ನಡೆದ ಕೆಲಸ ತನ್ನದೇಯೆಂದು ಜೀವಿಯು ಹೇಳುತ್ತಿದ್ದಾನೆ. ಸ್ವಪ್ನವನ್ನು ವಿವರಿಸಿಕೊಂಡು ನೋಡಿದರೆ, "ಸ್ವ" ಎಂದರೇ ತನಗೆ ಮಾತ್ರವೇಯೆಂದು, "ಅಪ್ನ" ಎಂದರೇ ಅನುಭವ ಎಂದು ತಿಳಿಯುತ್ತಿದೆ. ಸ್ವ+ಅಪ್ನ=ಸ್ವಪ್ನ ಎಂದರೇ, ಜೀವಿಗೆ ಮಾತ್ರವೇ ಅನುಭವಕ್ಕೆ ಬರುವುದು ಎಂದು ತಿಳಿಯುತ್ತಿದೆ. ಜೀವಿಗೆ ಒಂದು ಅನುಭವ ಬರಬೇಕೆಂದರೇ ಅದಕ್ಕೆ ಎಷ್ಟೋ ಕೃಷಿ ನಡೆಯಬೇಕಾಗಿರುತ್ತದೆ. ಎಷ್ಟೋ ಜನರೊಂದಿಗೆ ಸಂಬಂಧವಿರುವ ಕೆಲಸ ನಡೆಯಬೇಕಾಗಿದೆ. ಹೊರಗೆ ಪ್ರಪಂಚದಲ್ಲಿ ಯಾವ ಕಾರ್ಯವಾದರೂ ನಡೆಯುವುದಕ್ಕೆ ಅವಕಾಶವಿದೆ. ಆದ್ದರಿಂದ ಅದು ಎಲ್ಲರಿಗೂ ತಿಳಿಯುವುದಾಗಿ ಇರುವುದಲ್ಲದೆ, ಕೆಲವರೊಂದಿಗೆ ಸಂಬಂಧಪಟ್ಟಿರುತ್ತದೆ. ಆದರೇ ಸ್ವಪ್ನದಲ್ಲಿ ಇದಕ್ಕೆ ಪೂರ್ತಿ ವಿರುದ್ಧವಾಗಿ ಯಾರಿಗೂ ಸಂಬಂಧವಿಲ್ಲದೆ, ಯಾರಿಗೂ ತಿಳಿಯದಂತೆ ಕಾರ್ಯ ನಡೆದು, ಜೀವಿಗೊಬ್ಬನಿಗೆ ಮಾತ್ರವೇ ಅನುಭವ ಬರುತ್ತದೆನ್ನುವುದು ವಿಚಿತ್ರವಾಗಿದ್ದರೂ ಕೊನೆಗದು ಸತ್ಯ.

ಸ್ವಪ್ನದಲ್ಲಿನ ಸಂಘಟನೆಗಳು ಒಂದುಕಡೆ, ಅಸತ್ಯವಾಗಿ ಕಾಣಿಸಿದರೂ, ಒಂದುಕಡೆ ಅನುಭವಿಸಿದ ಜೀವಿಗೆ ಸತ್ಯವಾಗಿ ಕಾಣಿಸುತ್ತಿರುತ್ತದೆ.

ವಿವರವಾಗಿ ಅರ್ಥವಾಗುವುದಕ್ಕೆ, ಸ್ವಪ್ನದಲ್ಲಿನ ಸತ್ಯಾಸತ್ಯಗಳನ್ನು ಕುರಿತು ಯಾವಕಡೆ ಹೇಳಿದರೂ ಮತ್ತೊಂದು ಪ್ರಶ್ನೆ ಬಾರದೆ ಇರುವುದಿಲ್ಲ. ಸ್ವಪ್ನದಲ್ಲಿ ನಡೆದಿರುವುದು ಸತ್ಯ ಎಂದರೇ ಸತ್ಯಹೇಗಾಗುತ್ತದೆಯೆಂದು ಪ್ರಶ್ನೆಬರುತ್ತದೆ. ಒಂದುವೇಳೆ ಅಸತ್ಯವೆಂದು ಹೇಳಿದರೇ ಅಸತ್ಯ ಹೇಗಾಗುತ್ತದೆನ್ನುವ ಪ್ರಶ್ನೆಬರುತ್ತದೆ. ಎರಡುಕಡೆ ಪ್ರಶ್ನೆಗಳಿರುವ ಒಂದು ಸ್ವಪ್ನವನ್ನು ಕುರಿತು ಹೇಳುತ್ತೇನೆ ನೋಡಿರಿ. ಒಬ್ಬ ವ್ಯಕ್ತಿಗೆ ಸ್ವಪ್ನದಲ್ಲಿ ಒಬ್ಬ ಸ್ತ್ರೀಯೊಂದಿಗೆ ಸಂಗಮಿಸಿದ ಸಂಘಟನೆ ನಡೆದಿದೆಯೆಂದುಕೊಳ್ಳಿ. ಆಗ ಆತನ ಶರೀರದಿಂದ ವೀರ್ಯ ದ್ರವ ಸ್ರವಿಸಿ, ಬಟ್ಟೆಗಳ ಮೇಲೆ ಬಿದ್ದಿರುವುದು ಪ್ರತ್ಯಕ್ಷವಾಗಿ ಕಾಣಿಸುತ್ತಿರುತ್ತದೆ. ಎಚ್ಚರದೊಳಗೆ ಬಂದನಂತರ, ಆ ವ್ಯಕ್ತಿ ಅದೆಲ್ಲವೂ ಕನಸು ಎಂದುಕೊಂಡರೂ, ನಡೆದಕೆಲಸ ವಾಸ್ತವವೇ ಎನ್ನುವುದಕ್ಕೆ ಸಾಕ್ಷ್ಯವಾಗಿ ವೀರ್ಯ ಸ್ಕಲಿತ ಕಾಣಿಸುತ್ತಿದೆ. ಅದನ್ನನುಸರಿಸಿ ಒಬ್ಬ ಸ್ತ್ರೀಯೊಂದಿಗೆ ಆತನು ರಮಿಸಿದ್ದಾನೆನ್ನುವುದು ಸತ್ಯವೆಂದರೂ, ಆತನೊಂದಿಗಿರುವ ಸ್ತ್ರೀ, ಆತನ ಹತ್ತಿರಕ್ಕೆ ಬರುವುದು ಅಸತ್ಯ. ಆಕೆಗು ಈ ಸಂಘಟನೆಗು ಯಾವ ಸಂಬಂಧವಿಲ್ಲ. ಆದ್ದರಿಂದ ಸ್ವಪ್ನದಲ್ಲಿ ನಡೆದಿರುವುದು ಸತ್ಯವಲ್ಲ, ಅದನ್ನು ಸತ್ಯವೆಂದು ಹೇಗೆ ಹೇಳುತ್ತೀರೆಂದು ಪ್ರಶ್ನೆ ಬರುತ್ತದೆ. ಒಂದುವೇಳೆ ಯಾರಿಗೂ ಸಂಬಂಧವಿಲ್ಲದ್ದು, ಯಾರಿಗೂ ತಿಳಿಯದಿರುವುದು, ಆತನು ಮಾತ್ರ ಹೇಳುವುದು ಸತ್ಯವಲ್ಲವೆಂದು ಅಂದು ಕೊಂಡರೂ, ಈ ಕೆಲಸ ನಡೆದಿದೆಯೆಂದು, ಸಾಕ್ಷ್ಯವಾಗಿ ಹೊರಬಿದ್ದ ವೀರ್ಯ ಕಾಣಿಸುತ್ತಿರುವುದರಿಂದ, ಇದು ಹೇಗೆ ಅಸತ್ಯವೆಂದು ಪ್ರಶ್ನೆ ಬರುತ್ತದೆ. ಹೀಗೆ ಎರಡುಕಡೆ ಪ್ರಶ್ನೆಗಳಿಗೆ ಉತ್ತರ ಬೇಕೆಂದರೇ, ಸ್ವಪ್ನದಲ್ಲಿ ಕಾಣಿಸಿದ ಸ್ತ್ರೀ ಮತ್ತು ಉಳಿದ ಪಾತ್ರಗಳೆಲ್ಲ, ಯಾರೊ ತಿಳಿಯದ ವ್ಯಕ್ತಿ ಪೋಷಿಸಿರಬೇಕು. ಅಲ್ಲಿ ಸ್ತ್ರೀ ಪಾತ್ರವನ್ನು ಪೋಷಿಸಿರುವುದು, ಯಾರೋ ತಿಳಿಯದ ವ್ಯಕ್ತಿ. ಆದ್ದರಿಂದ ಆ ಸಂಘಟನೆ ಹೊರಗಿನವರಿಗೆ ಯಾವ ಸಂಬಂಧವಿಲ್ಲ. ಅದು ನಡೆದಂತೆ ಯಾರಿಗೂ ತಿಳಿದಿಲ್ಲ. ಸ್ವಪ್ನ ಹೊಂದಿದವನಿಗೆ ಮಾತ್ರ ನಡೆದ ಸಂಘಟನೆ ತಿಳಿಯುತ್ತದೆ.

ಸ್ವಪ್ನದಲ್ಲಿ ಎಲ್ಲಾ ಪಾತ್ರಗಳು ಪೋಷಿಸಿರುವುದು, ಯಾರಿಗೂ ತಿಳಿಯದ ಆತ್ಮವೇಯೆಂದು, ಅನುಭವಿಸಿದವನಿಗೆ ಕೂಡಾ ತಿಳಿದಿಲ್ಲ.

ಸ್ವಪ್ನದಲ್ಲಿ ನಡೆದ ಕಾರ್ಯದಲ್ಲಿ ಕೂಡಾ, ಜೀವಿಯು ಸುಖವನ್ನೊ ದುಃಖವನ್ನೊ ಅನುಭವಿಸುತ್ತಿದ್ದಾನೆ. ಸುಖದುಃಖಗಳನ್ನು ಅನುಭವಿಸುವುದೇ ಅಲ್ಲದೆ, ನಾನೇ ಆ ಕಾರ್ಯವನ್ನು ಮಾಡಿದ್ದೇನೆಂದು ಅಂದುಕೊಳ್ಳುತ್ತಿದ್ದಾನೆ. ಸ್ವಪ್ನದಲ್ಲಿ ಕಾರ್ಯವೆಲ್ಲವನ್ನು ನಡೆಸುವುದು ಆತ್ಮವೇ ಆದರೂ, ಆ ವಿಷಯ ತಿಳಿಯದ ಮನುಷ್ಯನಿಗೆ, ಶರೀರದಲ್ಲಿನ ಆಹಮ್ ಎನ್ನುವುದು, "ಈ ಕಾರ್ಯವೆಲ್ಲವನ್ನು ನೀನೇ ಮಾಡಿದ್ದೀಯಾ, ಯಾರೋ ಮಾಡಿದ್ದಾರೆಂದು ಅಂದುಕೊಳ್ಳಬೇಡ. ನೀನು ಹೊರತು ಮಾಡುವವನು ಯಾರೂ ಇಲ್ಲವೆಂದು" ಬೋಧಿಸುವುದರಿಂದ, ಜೀವಿಯು ಅಹಂವೊಂದರ ಭಾವನೆಯನ್ನು ಕೇಳಿ, ತಾನು ಅಹಂಭಾವನೆಯಿಂದ ಸೇರಿಹೋಗಿ, ಶರೀರವನ್ನೇ ನಾನೆನ್ನುವ ಭಾವನೆಯಿಂದ ತುಂಬಿಹೋಗಿ, ನಡೆದ ಕೆಲಸವನ್ನು ನಾನೇ ಮಾಡಿದ್ದೇನೆಂದು ಕೊಳ್ಳುತ್ತಿದ್ದಾನೆ. ಶರೀರದಲ್ಲಿ ಒಂದು ರವೆಯಷ್ಟಿರುವ ಜೀವಿಯು, ಶರೀರವೆಲ್ಲ ನಾನೇಯೆಂದು ಅಂದುಕೊಳ್ಳುವುದರಿಂದ ಪೂರ್ತಿಯಾಗಿ ತನ್ನ ಸ್ಥಿತಿಯನ್ನು ಮರೆತುಹೋಗಿದ್ದಾನೆಂದು ತಿಳಿಯುತ್ತಿದೆ. ಇದೇ ವಿಧಾನದ ಪ್ರಕಾರ, ಸ್ವಪ್ನದಲ್ಲಿ ನಡೆದ ಕೆಲಸದಲ್ಲಾಗಲಿ, ಎಚ್ಚರದಲ್ಲಿ ನಡೆದ ಕೆಲಸದಲ್ಲಾಗಲಿ ಕಾಣಿಸುತ್ತಿದೆ. ಎಚ್ಚರದಲ್ಲಿ ಹತ್ಯೆ ನಡೆದಾಗ, ಹತ್ಯೆ ಮಾಡಿದವನು ಯಾರಿಗೂ ತಿಳಿಯದಂತೆ ಶರೀರವೆಲ್ಲಾ ವ್ಯಾಪಿಸಿರುವ ಆತ್ಮ, ಶರೀರವನ್ನು ಕದಲಿಸಿ ಒಬ್ಬ ವ್ಯಕ್ತಿಯನ್ನು ಹತ್ಯೆ ಮಾಡುವುದು ನಡೆದಿದೆ. ಆದರೇ ಹತ್ಯೆ ನಡೆದ ಆ ವಿಷಯವನ್ನು ಪ್ರತ್ಯಕ್ಷ ಪ್ರಸಾರವಾಗಿ ಒಳಗಿರುವ ಜೀವಿಗೆ ಬುದ್ಧಿ ತಿಳಿಸಿದಾಗ, ಅಹಂ ಬೋಧನೆಯನ್ನು ಕೇಳಿದ ಜೀವಿಯು, ಎದುರುಗಡೆ ಕಾಣಿಸುತ್ತಾ ನಡೆಯುತ್ತಿರುವ ಕೆಲಸವನ್ನು, ತಾನೇ ಮಾಡುತ್ತಿದ್ದೇನೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಹಾಗೆ ಅಂದುಕೊಳ್ಳುವುದು ವಾಸ್ತವವಾಗಿ ಹತ್ಯೆ ಮಾಡಿದ ಆತ್ಮವನ್ನು ಮರೆತುಹೋಗಿ, ಜೀವಿಯು ತಾನೇ ಹಂತಕನಾಗಿ ತಿಳಿಯಲ್ಪಡುತ್ತಿದ್ದಾನೆ. ಜೀವನದಲ್ಲಿ ಪ್ರತಿ ಕೆಲಸವನ್ನು ಆತ್ಮವೇ ಮಾಡುತ್ತಿದ್ದರೂ, ಈ ದಿನ ಮನುಷ್ಯರೆಲ್ಲರೂ ಆತ್ಮಪಾತ್ರವನ್ನು ಗುರುತಿಸದೆ, ಎಲ್ಲಾ ಕೆಲಸಗಳನ್ನು ತಾವೇ ಮಾಡುತ್ತಿದ್ದೇವೆಂದುಕೊಳ್ಳುತ್ತಿದ್ದಾರೆ.

ಆತ್ಮದಿಂದ ನಡೆದ ಕೆಲಸವನ್ನು, ಜೀವಿಯು ನಾನೇ ಮಾಡಿದ್ದೇನೆಂದು ಎಷ್ಟು ದೊಡ್ಡದಾಗಿ ಹೇಳಿಕೊಂಡರೆ, ಅಷ್ಟು ದೊಡ್ಡ ಕರ್ಮ ಆತನನ್ನು ಸೇರುತ್ತಿದೆ. ಒಂದು ಹತ್ಯೆಯನ್ನು ಮಾಡಿದ್ದೇನೆಂದು ಹೆಚ್ಚಾಗಿ ಹೇಳಿಕೊಂಡರೆ, ಅದು ದೊಡ್ಡ ಹತ್ಯೆಯಾಗಿ ಲೆಕ್ಕಿಸಲ್ಪಟ್ಟು ದೊಡ್ಡ ಪಾಪವೇ ಬರುತ್ತಿದೆ. ಒಂದುವೇಳೆ ನಡೆದ ಹತ್ಯೆಯನ್ನು ಕಡಿಮೆಯಾಗಿ ಹೇಳಿಕೊಂಡರೆ, ಚಿಕ್ಕ ಹತ್ಯೆಯಾಗಿ ಲೆಕ್ಕಿಸಲ್ಪಟ್ಟು ಕಡಿಮೆ ಪಾಪ ಬರುತ್ತಿದೆ.

ಭೂಮಿಮೇಲೆ ಯಾರಾದರೂ ಆತ್ಮಜ್ಞಾನವನ್ನು ತಿಳಿದವನಾಗಿ, ಶರೀರದಲ್ಲಿ ಆತ್ಮ ಪಾತ್ರವನ್ನು ಗುರುತಿಸಿ, ಜೀವಿಯಾಗಿ ತನ್ನ ಸ್ಥಾನವೇನೊ ತಿಳಿದು, ತನ್ನ ಸ್ಥಿತಿಯನ್ನು ಗುರುತಿಸಿ, ಎಲ್ಲವೂ ಆತ್ಮದಿಂದಲೇ ನಡೆಯುತ್ತಿವೆ ಯೆಂದು, ತಾನು ಯಾವ ಕೆಲಸಕ್ಕು ಕಾರಣವಾಗಲಿ, ಕರ್ತನಾಗಲಿ ಅಲ್ಲವೆಂದು ತಿಳಿದು, ಅಹಮ್ ಭಾವನೆಗೆ ದೂರವಾಗಿ ಇರುವವನು, ವಾಸ್ತವವಾಗಿ ಆ ಕೆಲಸವನ್ನು ಮಾಡಲಿಲ್ಲ ಆದ್ದರಿಂದ, ಅವನನ್ನು ಹಂತಕನು ಎನ್ನುವುದಕ್ಕೆ ಸಾಧ್ಯವಿಲ್ಲ. ಹತ್ಯಾಪಾಪ ಅವನಿಗೆ ಬರುವುದಿಲ್ಲ. ನಡೆದ ಹತ್ಯೆಯನ್ನು ವಿವರಿಸಿ ನೋಡಿದರೆ, ಒಬ್ಬ ಮನುಷ್ಯನಲ್ಲಿ ಆತ್ಮ ಆ ಕೆಲಸವನ್ನು ಮಾಡಿದೆ ಆದರೇ, ಜೀವಿಯು ಮಾಡಲಿಲ್ಲವೆಂದು ತಿಳಿಯುತ್ತಿದೆ. ಆದ್ದರಿಂದ ಮೇಲಿನ ಗಾದೆಯಲ್ಲಿ ವಿವರಿಸಿ ನೋಡಿದರೆ ಸಂಬಂಧವೇ ಇಲ್ಲವೆಂದು ಹೇಳಿದ್ದಾರೆ. ಇದೇ ವಿಷಯವನ್ನು ಭಗವದ್ಗೀತೆಯಲ್ಲಿ ಮೋಕ್ಷ ಸನ್ಯಾಸ ಯೋಗದಲ್ಲಿ, 16, 17 ಶ್ಲೋಕಗಳಲ್ಲಿ ಭಗವಂತನು ಹೇಳಿದ್ದಾನೆ.

**16. ಶ್ಲೋ॥ ತತ್ರೈವಂ ಸತಿ ಕರ್ತಾರಂ ಆತ್ಮಾನಂ ಕೇವಲಂ ತು ಯಃ।**
**ಪಶ್ಯ ತ್ಯಕೃತಬುದ್ಧಿತ್ವಾತ್ ನ ಸ ಪಶ್ಯತಿ ದುರ್ಮತಿಃ॥**

**17. ಶ್ಲೋ॥ ಯಸ್ಯ ನಾಹಂಕೃತೋಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ।**
**ಹತ್ವಾಪಿ ಸ ಇಮಾನ್ ಲೋಕಾನ್ನ ಹಂತಿ ನನಿಬಧ್ಯತೇ॥**

**ಭಾವಾರ್ಥ :–** "ನಡೆಯುತ್ತಿರುವ ಕೆಲಸಗಳಿಗೆ ಕರ್ತನು ತಾನೇಯೆಂದು ಯಾರು ಅಂದುಕೊಳ್ಳುತ್ತಾನೊ, ಅವನು ಎಲ್ಲಾ ಕೆಲಸಗಳಿಗೆ, ಕರ್ತ ಮತ್ತೊಬ್ಬನಿದ್ದಾನೆನ್ನುವ ವಾಸ್ತವವನ್ನು ತಿಳಿಯದೆ ಅಜ್ಞಾನಿಯಾಗಿ ತನನ್ನೇ ಕರ್ತನಾಗಿ ಹೇಳಿಕೊಳ್ಳುತ್ತಾನೆ"

"ಯಾರ ಭಾವನೆಯಲ್ಲಿ ಅಹಂವೊಂದರ ಭಾವವಿರುವುದಿಲ್ಲವೊ, ನಡೆಯುತ್ತಿರುವ ಕೆಲಸದಲ್ಲಿ ಫಲಿತವನ್ನು ಯಾರು ಆಶಿಸುವುದಿಲ್ಲವೊ, ಅವನು ಈ ಲೋಕದಲ್ಲಿರುವವರೆಲ್ಲರನ್ನು ಸಾಯಿಸಿದರೂ ಅವನು ಹಂತಕನಲ್ಲ, ಮತ್ತೆ ಅವನಿಗೆ ಪಾಪ ಅಂಟುವುದಿಲ್ಲ." "ನೋಡಿದ್ದೀರಾ!" ದೇವರು ಯಾವ ವಿಧವಾಗಿ ಹೇಳಿದ್ದಾನೋ! ಮನುಷ್ಯ ಮಾಡುತ್ತಿರುವ ಕೆಲಸವನ್ನು ತಾನೇ ಮಾಡುತ್ತಿದ್ದೇನೆಂದು ಆ ಜೀವಿಯು ಅಂದುಕೊಳ್ಳುವುದು ಅಜ್ಞಾನವಾಗುತ್ತದೆ. ಆದ್ದರಿಂದ ಅವನು ಎಷ್ಟು ಅಂದುಕೊಂಡರೆ ಅಷ್ಟು ಪಾಪ ಬರುತ್ತದೆ. ಹಾಗಲ್ಲದೆ ಮನುಷ್ಯ ಮಾಡುತ್ತಿರುವ ಕೆಲಸಕ್ಕೆ, ಆ ಶರೀರದಲ್ಲಿನ ಆತ್ಮವೇ ಕರ್ತನೆಂದು ತಿಳಿದ ಜೀವಿಗೆ ಕರ್ಮ ಅಂಟುವುದಿಲ್ಲ. ಅವನು ಹತ್ಯೆ ಮಾಡಿದರೂ, ಅವನಿಗೆ ಪಾಪ ಬರುವುದಿಲ್ಲ, ಒಟ್ಟಿನಲ್ಲಿ ಅವನು ಹಂತಕನೇ ಅಲ್ಲ. ಇಂತಹ ಜ್ಞಾನವನ್ನು ತಿಳಿಸುತ್ತಾ, "ಹೆಚ್ಚಾಗಿ ಹೇಳಿಕೊಂಡರೆ ಬ್ರಹ್ಮಹತ್ಯೆ, ಕಡಿಮೆ ಹೇಳಿಕೊಂಡರೆ ಹತ್ಯೆ, ವಿವರಿಸಿ ಹೇಳಿಕೊಂಡರೆ ಸಂಬಂಧವೇ ಇಲ್ಲ" ಎನ್ನುವ ಗಾದೆಯನ್ನು ಹಿರಿಯರು ಹೇಳಿದ್ದಾರೆ.

## 13. ಮನೆ ಗೆದ್ದು ಮಂದಿ ಗೆಲ್ಲು

ಮನೆ ಎಂದರೇ ನಿವಾಸಿಸುವುದಕ್ಕೆ ಯೋಗ್ಯವಾಗಿರುವುದು. ಪಕ್ಷಿಗಳಿಗೆ ನಿವಾಸಯೋಗ್ಯವಾದ ಗೂಡುಗಳು, ಅವುಗಳಿಗೆ ಮನೆ ಇದ್ದಂತೆ. ಇರುವೆಗೆ ಹುತ್ತಗಳು, ಮನುಷ್ಯರಿಗೆ ಚಿಕ್ಕ ಗುಡಿಸಲಿನಿಂದ ಮೊದಲುಗೊಂಡು, ದೊಡ್ಡ ಮಹಡಿಗಳವರೆಗು ಮನೆಯಾಗಿವೆ. ಪಕ್ಷಿಗಳಿಗೆ ಒಂದು ವಿಧ, ಇರುವೆಗಳಿಗೆ ಮತ್ತೊಂದು ವಿಧ, ಮನುಷ್ಯರಿಗೆ ಇನ್ನೊಂದು ವಿಧವಾಗಿರುವ ಮನೆಗಳೆಲ್ಲವೂ ನಾವು ನೋಡಿಯೇ ಇದ್ದೇವೆ. ಮನುಷ್ಯ ನಿವಾಸಿಸುವುದು ಮನೆ. ನಿವಾಸಿಸುವುದು ಯಾರಿಗಾದರೂ ಎರಡು ವಿಧಗಳಾಗಿ ಇವೆ. ಒಬ್ಬ ಮನುಷ್ಯ ನಿವಾಸಿಸುವುದು ಒಂದು ವಿಧದ ಮನೆಯಾಗಿದ್ದು, ಎರಡನೆ ವಿಧವನ್ನು ಗೃಹ ಎನ್ನುತ್ತೇವೆ. ಈಗ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಮನೆ ಎಂದರೂ ಗೃಹ ಎಂದರೂ ಎರಡೂ ಒಂದೇ ಅಲ್ಲವೇ! ಮನೆಯನ್ನು, ಗೃಹವನ್ನು ಬೇರೆಬೇರೆಯೆಂದು ಹೇಳುವುದೇನು? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಹೀಗೆ ಇದೆ. ಒಂದು ಕಟ್ಟಡವನ್ನು ಮನೆ ಎನ್ನಬಹುದು. ಸ್ವಲ್ಪ ವಿಸ್ತೀರ್ಣವಾದ ಮನೆಯಲ್ಲಿ

ಒಬ್ಬರು ಇಲ್ಲವೇ ಅದಕ್ಕಿಂತ ಹೆಚ್ಚಾಗಿ ಮನುಷ್ಯರು ನಿವಾಸಿಸಬಹುದು. ಆದರೇ ಗೃಹದಲ್ಲಿ 26 ಮಂದಿವರೆಗು ಇರುತ್ತಾರೆ. ಗೃಹ ಎಂದರೇ ಗ್ರಹ ನಿವಾಸಿಸುವುದು ಎಂದು ಅರ್ಥ. ಗ್ರಹಿಸುವವನನ್ನು ಗ್ರಹ ಎನ್ನುತ್ತೇವೆ. ಜೀವಿಯು ಬುದ್ಧಿ ಮೂಲಕ ಎಲ್ಲವನ್ನು ಗ್ರಹಿಸುತ್ತಿದ್ದಾನೆ. ಆದ್ದರಿಂದ ಜೀವಿಯನ್ನು ಗ್ರಹ ಎಂದು ಹೇಳಬಹುದು. ಮನೆಯಲ್ಲಿರುವವನಿಗೆ, ಮನೆ ದಾಟಿ ಹೊರಗಿರುವುದೆಲ್ಲ ಬೀದಿಯಾಗುತ್ತದೆ ಎನ್ನುವ ಮಾತನ್ನು ಕೇಳಿಯೇ ಇರುತ್ತೇವೆ. ಕೆಲವರು ಕಲಿತು ಮಾತನಾಡಿ ಕೊಳ್ಳುವುದಕ್ಕೆ ಅವಕಾಶವಿರುವ ಸ್ಥಳವನ್ನು ಕಟ್ಟೆ ಎನ್ನುತ್ತೇವೆ. ಜೀವಿಯು ನಿವಾಸಿಸುವ ಶರೀರವನ್ನು ಗೃಹ ಎಂದು ಹೇಳಬಹುದು ಅಲ್ಲವೇ? ಶರೀರ (ಗೃಹ) ದಾಟಿ, ಹೊರಗೆ ಎಲ್ಲಿಯಾದರೂ ಬೀದಿಮಾತಾಗುತ್ತದೆ. ನಿವಾಸಿಸುವುದು ಮನೆ ಆದ್ದರಿಂದ ಗೃಹವನ್ನು ಕೂಡಾ ಮನೆ ಎನ್ನಬಹುದು. ಮನುಷ್ಯ, ಅವನೊಂದಿಗೆ ಕೆಲವರು ಇರುವುದು ಮನೆಯಾದರೆ, ಜೀವಿಯು, ಜೀವಿಯೊಂದಿಗೆ ಅಂತಹವರೇ ಕೆಲವರಿರುವುದನ್ನು ಗೃಹ ಎನ್ನುತ್ತೇವೆ. ಪ್ರತ್ಯೇಕಿಸಿ ಜೀವಿಯು ನಿವಾಸಿಸುವುದನ್ನು ಗೃಹ ಎನ್ನುವುದರಲ್ಲಿ, ಜೀವಿಯು ಪಾಪಪುಣ್ಯಗಳನ್ನು ಗ್ರಹಿಸಿ, ಅವುಗಳ ಫಲಿತಗಳನ್ನು ಕೂಡಾ ಗ್ರಹಿಸುತ್ತಿದ್ದಾನೆ. ಅಷ್ಟೇಅಲ್ಲದೆ ಹೊರಗಿನಿಂದ ತಿಳಿಯಲ್ಪಡುವ ವಿಷಯಗಳನ್ನು ಬುದ್ಧಿ ಗ್ರಹಿಸಿ, ಜೀವಿಗೆ ತಿಳಿಸಿದಾಗ, ಜೀವಿಯು ಅವುಗಳನ್ನು ಗ್ರಹಿಸಲ್ಪಡುತ್ತಿದ್ದಾನೆ. ಈ ವಿಧವಾಗಿ ಜೀವಿಯು ಗ್ರಹಿಸುವ ವನಾದ್ದರಿಂದ, ಜೀವಿಯು ನಿವಾಸಿಸುವ ಶರೀರವನ್ನು 'ಗೃಹ' ಎಂದು ಕರೆಯುತ್ತಿದ್ದೇವೆ.

ಶರೀರ ಗೃಹದಲ್ಲಿ ಜೀವಿಯೊಂದಿಗೆ 26 ಮಂದಿ ನಿವಾಸಿಸುತ್ತಿದ್ದಾರೆ. ಮಂದಿ ಎಂದರೇ ಮನುಷ್ಯರೆಂದು ಅಂದುಕೊಳ್ಳಬಾರದು. ಮಂದಿ ಎಂದರೇ ಗುಂಪು ಎಂದು ಅರ್ಥ ಮಾಡಿಕೊಳ್ಳಿ. ಒಂದು ವಿಧವಾಗಿ ಹೇಳಬೇಕೆಂದರೇ, ಶರೀರದಲ್ಲಿ 26 ಭಾಗಗಳಿವೆಯೆಂದು ಹೇಳಬಹುದು. ಪ್ರತ್ಯೇಕವಾದ ಕೆಲಸ ಮಾಡುವುದನ್ನು ಪ್ರತ್ಯೇಕ ಭಾಗವಾಗಿ ಹೇಳಿದರೇ, ಅಂತಹವುಗಳು 24 ಇವೆ. ನಂತರ 25ನೆಯವನು ಜೀವಾತ್ಮ, 26ನೆಯವನು ಆತ್ಮ. 26ನೇ ಆತ್ಮ ಒಟ್ಟಾರೆ ಶರೀರಕ್ಕೆಲ್ಲ ಯಜಮಾನ. ಆದರೂ ಆತನು ಯಾರಿಗೂ ತಿಳಿಯದೇ ಇದ್ದಾನೆ. 25ನೆಯವನಾದ ಜೀವಾತ್ಮಯೇ ನಾವು (ನೀನು). ಜೀವಾತ್ಮನಾದ ನೀನು,

ನಿನ್ನ ಶರೀರದಲ್ಲಿನ ಉಳಿದ 25 ಭಾಗಗಳು ಯಾವ ಕಾರ್ಯಗಳು ಮಾಡುತ್ತಿವೆಯೋ, ತಿಳಿಯಲ್ಪಟ್ಟರೇ ಜ್ಞಾನಿ ಆಗುತ್ತೀಯಾ. ನೀನು ಜ್ಞಾನಿಯಾದ ನಂತರ, ನಿನ್ನ ಶರೀರ ಹೊರಗಿನಿಂದ ಬರುವ ಸಮಸ್ಯೆಗಳನ್ನು ಸುಲಭವಾಗಿ ಜಯಿಸಬಲ್ಲೆ. ಯಾವ ಸಮಸ್ಯೆಗಾದರೂ ಪರಿಷ್ಕಾರವನ್ನು ತಿಳಿಯಬಲ್ಲೆ. ನಿನ್ನ ಮನೆಯಲ್ಲಿನ ಮನುಷ್ಯರು ನಿನ್ನೊಂದಿಗೆ ಎಷ್ಟುಜನರಿರುವುದು, ಅವರು ಏನು ಮಾಡುವುದು ಹೇಳುವ ನೀನು, ನಿನ್ನ ಶರೀರ ಗೃಹದಲ್ಲಿ ನಿನ್ನಂತೆ ಎಷ್ಟುಜನರಿರುವುದು, ಅವರೆಲ್ಲರೂ ಏನು ಮಾಡುತ್ತಿರುವುದು ಹೇಳಲಾರೆ. ನೀನೇ ಅಲ್ಲ, ನಮಗು ಜ್ಞಾನ ತಿಳಿದಿದೆ, ನಾವು ಬೋಧಿಸುವವರು ಎಂದು ಹೇಳಿಕೊಳ್ಳುವವರು ಕೂಡಾ, ಶರೀರ ಗೃಹವನ್ನು ಕುರಿತು ಪೂರ್ತಿಯಾಗಿ ತಿಳಿಯರು. ಅಂತಹವರನ್ನು ಕುರಿತು ಒಬ್ಬ ಜ್ಞಾನಿ ತನ್ನ ಪದ್ಯದಲ್ಲಿ ಈ ವಿಧವಾಗಿ ಹೇಳಿದ್ದಾನೆ ನೋಡಿರಿ.

**ಪಂಚತತ್ವಗಳನ್ನು ಪಂಚೀಕರಿಸದೆ**
**ಒಳ್ಳೆಯ ಯತಿಗಳೆಂದು ಮಾತುಗಳೆಂದರು**
**ಕುಂಚದಲ್ಲಿ ಗಜವು ಮೊಟ್ಟೆ ಇಟ್ಟಿದ ವಿಧವಾಗಿ**
**ಅಖಿಲ ಜೀವಸಂಗ ಆತ್ಮಲಿಂಗ.**

**ಭಾವಾರ್ಥ :–** ಪ್ರಕೃತಿಯಾದ ಪಂಚಭೂತಗಳಿಂದ ತಯಾರಾಗಿದೆ ಶರೀರ. ಪಂಚಭೂತಗಳನ್ನು ಪಂಚೀಕರಿಸಿದರೇ ಒಟ್ಟು 25 ಭಾಗಗಳಾಗುತ್ತವೆ. 25 ಭಾಗಗಳಿಂದಿರುವ ಶರೀರವನ್ನು ಕುರಿತು ಪೂರ್ತಿಯಾಗಿ ತಿಳಿಯದಂತೆ, ಯಾವ ಭಾಗ ಯಾವ ಕೆಲಸವನ್ನು ಮಾಡುತ್ತಿದೆಯೋ ತಿಳಿಯದಂತೆ, ನಾನು ಜ್ಞಾನಿ ಎಂದರೇ, ಆನೆ ಪುಟ್ಟಿ (ಮಂಕ್ರಿ) ಕೆಳಗೆ ಮೊಟ್ಟೆ ಇಟ್ಟಂತಿರುತ್ತದೆ. ಆನೆ ಪುಟ್ಟಿಕೆಳಗೆ ಮೊಟ್ಟೆ ಇಡುವುದು ಎಷ್ಟು ಸತ್ಯವೋ, ಶರೀರ ಅಂತರಂಗದಲ್ಲಿನ ಕಾರ್ಯಗಳನ್ನು ತಿಳಿಯದವನನ್ನು, ಜ್ಞಾನಿ ಎಂದು ಹೇಳುವುದು ಅಷ್ಟೇ ಸತ್ಯವಾಗುತ್ತದೆ. ಆನೆ ಪುಟ್ಟಿಕೆಳಗೆ ಮೊಟ್ಟೆ ಇಡುವುದು ಪೂರ್ತಿ ಅಸತ್ಯ ಆದ್ದರಿಂದ, ಅಂತರಂಗದಲ್ಲಿನ ಭಾಗಗಳ ಕಾರ್ಯಗಳು ತಿಳಿಯದವನನ್ನು, ಜ್ಞಾನಿ ಎನ್ನುವುದು ಕೂಡಾ ಪೂರ್ತಿ ಅಸತ್ಯ. ಗ್ರಹವಾಗಿರುವ ಜೀವಿಯು ತನ್ನ ಶರೀರ ಗೃಹದಲ್ಲಿರುವ 24 ಭಾಗಗಳ

ಕೆಲಸವನ್ನು ತಿಳಿದದಿನ, ಹೊರಗಿನಿಂದ ಬರುವ ವಿಷಯಗಳನ್ನು ಸುಲಭವಾಗಿ ಜಯಿಸುತ್ತಾನೆ. ಒಳಗೆ ತನ್ನ ಸಹಚರರನ್ನು ಕುರಿತು ತಿಳಿಯದವನು, ಹೊರಗಿನಿಂದ ಬರುವ ಸಮಸ್ಯೆಗಳನ್ನು ಪರಿಷ್ಕರಿಸಿಕೊಳ್ಳಲಾರನು. ಅವುಗಳನ್ನು ಜಯಿಸಲಾರದೆ ಕುಗ್ಗಿಹೋಗುತ್ತಾನೆ. ಆದ್ದರಿಂದ ಜ್ಞಾನದೃಷ್ಠಿಯಿಂದ ಹಿರಿಯರು, ಮನೆಯಲ್ಲಿ ಗೆಲ್ಲದವನು ಹೊರಗೆ ಗೆಲ್ಲಲಾರನೆನ್ನುವ ಉದ್ದೇಶದಿಂದ "ಮನೆಯಲ್ಲಿ ಗೆದ್ದು ಬೀದಿ ಗೆಲ್ಲು" ಎಂದಿದ್ದಾರೆ. ಹೊರಗಿನ ಮನೆಯಲ್ಲಿ ಗೆದ್ದರೇ, ಬಜಾರಿನಲ್ಲಿ ಗೆಲ್ಲಬಹುದೆಂದು ಹೊರಗಿನ ಅರ್ಥದಿಂದ ಈ ಗಾದೆಯನ್ನು ಹೇಳಿಕೊಳ್ಳಬಾರದು. ಗಾದೆಯನ್ನು ಎಂದಿಗಾದರೂ ಜ್ಞಾನದೃಷ್ಠಿಯಿಂದಲೇ ನೋಡಬೇಕು. ಹೇಳಿದ ಗಾದೆ ಬಾಹ್ಯರ್ಥವನ್ನು ಕೊಡುವುದಾಗಿ ಕಾಣಿಸುತ್ತಿದ್ದರೂ, ಅದು ಅಂತರಾರ್ಥ ಹೊಂದಿರುತ್ತದೆ. ಆದ್ದರಿಂದ ಮನೆಯಲ್ಲಿ ಗೆದ್ದು ಎಂದು ಇರುವಮಾತನ್ನು, ಶರೀರದಲ್ಲಿನ ಪ್ರತಿ ಭಾಗವೊಂದರ ವಿವರವನ್ನು ತಿಳಿದಿರಬೇಕೆಂದು, ಹೇಳವುದಾಗಿ ತಿಳಿಯಬೇಕು. ನೀನು ನಿವಾಸಿಸುವ ಶರೀರದಲ್ಲಿಯೇ ಆತ್ಮ, ಪರಮಾತ್ಮ ಇದೆ. ಆದ್ದರಿಂದ ನೀನು ಆತ್ಮಜ್ಞಾನವನ್ನು ಶರೀರದಿಂದಲೇ ಆರಂಭಮಾಡಿ, ಶರೀರ ದಲ್ಲಿಯೇ ಹುಡುಕಬೇಕಾಗಿರುತ್ತದೆ. ಕೊನೆಗೆ, ಮೋಕ್ಷವನ್ನು ಹೊಂದುವ ಸಮಯದಲ್ಲಿ ಕೂಡಾ ಶರೀರದಲ್ಲಿನ ಪರಮಾತ್ಮನಲ್ಲಿಯೇ ಬೆರೆಯಬೇಕಾಗಿದೆ. ಆದ್ದರಿಂದ ಯಾರಾದರೂ ಶರೀರವನ್ನು ಕುರಿತು ಪೂರ್ತಿಯಾಗಿ ತಿಳಿದ ನಂತರವೇ ಆತ್ಮಜ್ಞಾನಿ ಆಗುತ್ತಾನೆ.

## 14. ಅಮ್ಮನಲ್ಲದ ಅಮ್ಮ. ನಿನಗಿದ್ದಾಳೆ, ನನಗಿದ್ದಾಳೆ

ಅಮ್ಮ ಎಂದರೇ ತಿಳಿಯದವನು ಭೂಮಿ ಮೇಲೆ ಯಾರೂ ಇರುವುದಿಲ್ಲ. ಪ್ರತಿ ಒಬ್ಬರಿಗು ಅಮ್ಮ ಒಬ್ಬಳೇ ಆದರೂ, ಅಪ್ಪಂದಿರು ಇಬ್ಬರಿರಬಹುದು, ಇರದೆಹೋಗಬಹುದು. ಅಮ್ಮ ಜೀವನದಲ್ಲಿ ಒಬ್ಬ ಗಂಡ ಮರಣಿಸಿದ ನಂತರ ಎರಡನೆ ಗಂಡನನ್ನು ವಿವಾಹವಾದಾಗ, ಆತನು ಕೂಡಾ ಅಮ್ಮನಿಗೆ ಗಂಡ ಆಗಿರುವುದರಿಂದ ಆತನು ಕೂಡಾ ತಂದೆಯೇ ಆಗುತ್ತಾನೆ. ಇದನ್ನನುಸರಿಸಿ ಅಪ್ಪಂದಿರು ಎಷ್ಟು ಜನರಾದರೂ ಅಮ್ಮ ಒಬ್ಬಳೇ ಎನ್ನುವ ನಾನ್ನುಡಿ ಇದೆ. ಇದೆಲ್ಲವೂ ಲೋಕಕ್ಕೆ ತಿಳಿದ ಸತ್ಯ, ಆದರೆ ಲೋಕಕ್ಕೆ ತಿಳಿಯದ ಸತ್ಯವೊಂದು

ಇದೆ. ಅದೇನೆಂದರೇ! ಪ್ರತಿ ಮನುಷ್ಯನಿಗೂ ಇಬ್ಬರು ಅಮ್ಮಂದಿರು, ಇಬ್ಬರು ಅಪ್ಪಂದಿರು ಇದ್ದಾರೆ. ಇದು ಹೇಗೆ ಸಾಧ್ಯವಾಗುತ್ತದೆಂದು ಆಶ್ಚರ್ಯ ಹೋಗಬೇಕಾದ ಕೆಲಸವಿಲ್ಲ. ತಂದೆಯರು ಇಬ್ಬರಿದ್ದರು, ಅಮ್ಮವಾತ್ರ ಒಬ್ಬರೇಯೆಂದು ತಿಳಿದರು, ಈಗ ಮಾತ್ರ ತಾಯಂದಿರು ಕೂಡಾ ಇಬ್ಬರಿದ್ದಾರೆಂದು ಹೇಳದೆ ತಪ್ಪಲಿಲ್ಲ. ತಂದೆಯರು ಕೂಡಾ ಪ್ರತಿಯೊಬ್ಬರಿಗು ಇಬ್ಬರಿದ್ದಾರೆಂದು ತಿಳಿಯುತ್ತಿದೆ. ಒಬ್ಬ ತಾಯಿ, ಒಬ್ಬ ತಂದೆ ಶಾಶ್ವತವಾಗಿ ಇರುವಾಗ, ಮತ್ತೊಂದು ಜೋಡಿ ತಾಯಿತಂದೆಯರು ಜೀವಿಯ ಜನ್ಮ ಜನ್ಮಕ್ಕು ಬದಲಾಗುತ್ತಿರುತ್ತಾರೆ. ಇದನ್ನನುಸರಿಸಿ ಶಾಶ್ವತ ತಾಯಿ ತಂದೆಯರೆಂದು, ತಾತ್ಕಾಲಿಕ ತಾಯಿ ತಂದೆಯರೆಂದು ಎರಡು ವಿಧಗಳಿಗಿರುವಂತೆ ತಿಳಿಯುತ್ತಿದೆ. ತಾತ್ಕಾಲಿಕ ತಾಯಿ ತಂದೆಯರು, ಪ್ರತಿ ಜನ್ಮಕ್ಕು ಬದಲಾಗುತ್ತಿರುತ್ತಾರೆ. ಪ್ರಸ್ತುತ ಜನ್ಮದಲ್ಲಿ ನಿನಗಾಗಲಿ, ನನಗಾಗಲಿ, ತಾತ್ಕಾಲಿಕ ತಾಯಿ ತಂದೆಯರಿದ್ದಾರೆ. ಇವರು ಇಂತಹವರೆಂದು ಕಾಣಿಸುತ್ತಿದ್ದಾರೆ. ಆದರೇ ಶಾಶ್ವತ ತಾಯಿ ತಂದೆಯರಿದ್ದಾರೆಂಬ ವಿಷಯ ಬಹಳಜನರಿಗೆ ತಿಳಿದಿಲ್ಲ. ಶಾಶ್ವತವಾದ ತಾಯಿ ತಂದೆಯರು, ಯಾರಿಗೂ ಕಾಣಿಸದಂತೆ ಇರುವುದರಿಂದ ಅವರನ್ನು ಯಾರು ತಿಳಿಯದಂತಿದ್ದಾರೆ.

ಕಾಣಿಸದ ಶಾಶ್ವತವಾದ ತಾಯಿ ತಂದೆಯರಿಗೆ ನೀನಾಗಲಿ, ನಾನಾಗಲಿ ಮತ್ತ್ಯಾರಾದರೂ ಆಗಲಿ ಒಂದೇಸಲ ಜನ್ಮಿಸುತ್ತೇವೆ. ಯಾವಾಗಲೋ ಸೃಷ್ಠಿ ಆದಿಯಲ್ಲಿ ಪ್ರಕೃತಿಯೆನ್ನುವ ತಾಯಿಗೆ, ಪರಮಾತ್ಮ ಎನ್ನುವ ತಂದೆಗೆ ಹುಟ್ಟಿದ ನಾವು ಇಂದಿನವರೆಗು ಬದುಕಿದ್ದೇವೆ. ಅಂದಿನಿಂದ ಇಂದಿನವರೆಗು ಎಷ್ಟೋಸಲ ಭೌತಿಕವಾಗಿ ಮರಣಿಸಿ, ಶರೀರವನ್ನು ಬದಲಿಸಿಕೊಂಡು ಹುಟ್ಟಿದ ನಾವು, ಇಲ್ಲಿಯತನಕ ಶಾಶ್ವತವಾಗಿದ್ದೇವೆ. ಶರೀರವನ್ನು ಧರಿಸಿದ ಮನುಷ್ಯನಾಗಲ್ಲದೇ, ಆತ್ಮ ಜೊತೆಯಾಗಿರುವ ಜೀವಿಯಾಗಿ ಇಂದಿನವರೆಗು ಇದ್ದೇವೆ. ಇಲ್ಲಿಯವರೆಗು ಶಾಶ್ವತವಾಗಿ ಪ್ರಕೃತಿ ತಾಯಿಯಾಗಿ, ಪರಮಾತ್ಮ ತಂದೆಯಾಗಿದ್ದಾರೆ. ಆದರೇ ನಮಗೆ ದೇವರೇ ತಂದೆಯೆಂದು, ಪ್ರಕೃತಿಯೇ ಮಾತೆಯಾಗಿದೆಯೆಂದು ಯಾರಿಗೂ ತಿಳಿಯದಂತೆ ಹೋಗಿದೆ. ಎಲ್ಲಿಯೋ ಒಂದುಕಡೆ, ತನ್ನನ್ನು ಕುರಿತು ತಾನು ತಿಳಿದ ಜ್ಞಾನಿಮಾತ್ರ ತನಗೆ ತಂದೆ ದೇವರೆಂದು ತಾಯಿ ಮಾಯೆಯೆಂದು (ಪ್ರಕೃತಿಯೆಂದು) ಹೇಳಿಕೊಳ್ಳುತ್ತಿದ್ದಾನೆ. ಹಾಗೆ ತಿಳಿದ ಜ್ಞಾನಿಗಳು ಶಾಶ್ವತ ತಾಯಿ

ತಂದೆಯನ್ನು ಕುರಿತು ಮನುಷ್ಯರಿಗೆ ತಿಳಿಯುವಂತೆ, ಅನೇಕ ವಿಧಗಳಾಗಿ ಅಲ್ಲಲ್ಲಿ ಹೇಳಿದ್ದಾರೆ. ಯತಿಯಾದ ವೇಮನ ಯೋಗಿ ತನ್ನ ಪದ್ಯದಲ್ಲಿ ಹೀಗೆ ಹೇಳಿದ್ದಾನೆ.

**ತಂದೆ ತಾಯಿಯರ ಮೇಲೆ ದಯೆವಿಲ್ಲದ ಪುತ್ರನು**
**ಜನಿಸಲೇನು ಅವನು ಗತಿಸಲೇನು.**
**ಹುತ್ತದಲ್ಲಿ ಗೆದ್ದಲು  ಹುಟ್ಟುವುದಿಲ್ಲವಾ, ಸಾಯುವುದಿಲ್ಲವಾ**
**ವಿಶ್ವದಾಭಿ ರಾಮ ಕೇಳು ವೇಮ.**

ಈ ಪದ್ಯದಲ್ಲಿ ವೇಮನಯೋಗಿ, ಶಾಶ್ವತವಾದ ತಾಯಿತಂದೆಯರ ಮೇಲೆ ಧ್ಯಾಸ ಇಲ್ಲದವನು, ಹುತ್ತದಲ್ಲಿನ ಗೆದ್ದಲಿಗೆ ಸಮಾನವೆಂದು ಹೇಳಿದ್ದಾನೆ. ಹುತ್ತದಲ್ಲಿನ ಗೆದ್ದಲು ಹುಟ್ಟಿದರೂ ಗಿಟ್ಟಿದರೂ, ಅವುಗಳ ಜೀವನ ಇದ್ದರೂ ಇಲ್ಲದಂತೆ ಅಲ್ಲವೇ! ಹಾಗೆಯೇ ಪ್ರಕೃತಿ ಪರಮಾತ್ಮರನ್ನು ಕುರಿತು ತಿಳಿಯದವನು, ಹುಟ್ಟಿದರೂ, ಹುಟ್ಟದಿದ್ದರೂ ಒಂದೇಯೆಂದು, ಅಂತಹವನ ಜೀವನ ವ್ಯರ್ಥವೆಂದು ಹೇಳಿದ್ದಾರೆ. ಒಂದು ಮತ ಮೂಲ ಗ್ರಂಥದಲ್ಲಿ ಹೀಗೆ ಹೇಳಲ್ಪಟ್ಟಿದೆ. "ತಂದೆಯೆಂದು ಯಾರನ್ನು ಹೆಸರಿಟ್ಟು ಕರೆಯಬೇಡ,  ನಿನ್ನ ತಂದೆ ನಿನಗೆ ತಿಳಿಯದ ಲೋಕದಲ್ಲಿ, ಲೋಕವಲ್ಲದ ಲೋಕದಲ್ಲಿ ಇದ್ದಾನೆ." ಈ ವಿಧವಾಗಿ ಎಷ್ಟೋಜನ ಜ್ಞಾನಿಗಳು ಬೇರೆಬೇರೆ ವಿಧಗಳಲ್ಲಿ ನಮ್ಮ ಶಾಶ್ವತ ತಾಯಿ ತಂದೆಯರನ್ನು ಕುರಿತು ಹೇಳಿದ್ದಾರೆ. ಆದರೂ ಅವರು ಏನು ಹೇಳಿದ್ದಾರೊ ತಿಳಿಯದ ಸ್ಥಿತಿಯಲ್ಲಿ ಮನುಷ್ಯರಿದ್ದುಹೋಗಿ, ಅಸಲಾದ ತಾಯಿತಂದೆಯರನ್ನು ಕುರಿತು ತಿಳಿಯದೆ ಹೋಗಿದ್ದಾರೆ. ಇಂದೂಗಳಿಗೆ (ಹಿಂದೂಗಳಿಗೆ) ಮೂಲ ಗ್ರಂಥವಾದ ಭಗವದ್ಗೀತೆಯಲ್ಲಿರುವ, ಗುಣತ್ರಯ ವಿಭಾಗಯೋಗವೆನ್ನುವ ಅಧ್ಯಾಯದಲ್ಲಿ, 3, 4ನೇ ಶ್ಲೋಕಗಳಲ್ಲಿ ದೇವರಾದ ಭಗವಂತನೇ ಸ್ವತಃವಾಗಿ, ಮಾನವರಿಗು ಮತ್ತು ಸರ್ವಜೀವರಾಶಿಗಳಿಗು, ಶಾಶ್ವತವಾದ ತಾಯಿತಂದೆಯರನ್ನು ಕುರಿತು ಹೇಳುವುದಾಗಿದೆ. ಯಾರು ಯಾವ ತಾಯಿ ಗರ್ಭದಿಂದ ಹುಟ್ಟಿದರೂ, ಬೀಜದಾತನಾದ ನಾನು ತಂದೆಯೆಂದು, ಪ್ರಕೃತಿ ತಾಯಿಯೆಂದು ಹೇಳಿದ್ದಾನೆ. ಈ ವಿಷಯವನ್ನು ಕುರಿತು ತಿಳಿದ ಒಬ್ಬ ಮನುಷ್ಯ, ಇನ್ನೊಬ್ಬನೊಂದಿಗೆ "ಅಮ್ಮನಲ್ಲದ ಅಮ್ಮ ನಿನಗಿದ್ದಾಳೆ ನನಗಿದ್ದಾಳೆ" ಎಂದು ಹೇಳಿದ್ದಾನೆ. ಆ

ಮಾತು ಈ ದಿನ ಗಾದೆಯಾಗಿದ್ದರೂ, ಅದರಲ್ಲಿನ ಅರ್ಥ ಎಲ್ಲರಿಗೂ ತಿಳಿಯದಂತೆ ಹೋಗಿದೆ. ಈಗ ಈ ವಾಕ್ಯಕ್ಕೆ ಅರ್ಥ ತಿಳಿದಿದೆ ಎಂದುಕೊಳ್ಳುತ್ತೇನೆ.

## 15. ನಿನಗೂ ಬೆಬ್ಬೆಬ್ಬೇ! ನಿನ್ನ ಅಬ್ಬಗೂ (ತಾತನಿಗೂ) ಬೆಬ್ಬೆಬ್ಬೇ!

ಒಬ್ಬನು ಇನ್ನೊಬ್ಬನನ್ನು ಅಣಕಿಸುವಾಗಾಗಲಿ, ಅವಹೇಳನವಾಗಿ ಮಾತನಾಡುವಾಗಾಗಲಿ, ನಿನಗಾಗಲಿ, ನಿನ್ನ ತಾತಗಾಗಲಿ ಭಯಪಡುವುದಿಲ್ಲ ಎಂದು ಹೇಳುವಾಗಾಗಲಿ, ನಿನಗೂ ಬೆಬ್ಬೆಬ್ಬೇ, ನಿನ್ನ ತಾತನಿಗೂ ಬೆಬ್ಬೆಬ್ಬೇ ಎನ್ನುವ ಮಾತನ್ನು ಬಳಸುತ್ತಿರುತ್ತಾರೆ. ಈ ಮಾತು ಕೆಲವು ಪ್ರಾಂತಗಳಲ್ಲಿ ಗಾದೆಯಾಗಿ ಕೂಡಾ ಬಳಸಲ್ಪಡುತ್ತಿದೆ. ಪ್ರಪಂಚ ವಿಧಾನದಲ್ಲಿ, ಯಾರು ಯಾವ ಅರ್ಥದಿಂದ ಹೇಳಿಕೊಂಡರೂ, ನಾವು ಮಾತ್ರ ಹಿರಿಯರು ಹೇಳಿದ ಮಾತನ್ನು, ಆತ್ಮಜ್ಞಾನದಿಂದಲೇ ವಿವರಿಸಿ ಹೇಳಿಕೊಳ್ಳೋಣ. ಸೃಷ್ಠಿ ಆದಿಗಿಂತ ಮೊದಲು, ಏಕ ಸ್ವರೂಪನಾಗಿರುವ ದೇವರು, ಸೃಷ್ಠಿ ಆದಿ ನಂತರ ಮೂರು ವಿಧಗಳಾಗಿ ವಿಭಜಿಸಲ್ಪಟ್ಟಿದ್ದಾನೆ. ಮೊದಲು ತನ್ನಿಂದ ಪ್ರಕೃತಿಯನ್ನು ಬೇರ್ಪಡಿಸಿದ ಪರಮಾತ್ಮ (ದೇವರು), ತಾನು ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದಾನೆ. ಒಂದು ಭಾಗ ಜೀವಾತ್ಮವಾಗಿ, ಎರಡನೆ ಭಾಗ ಆತ್ಮವಾಗಿ, ಮೂರನೆ ಭಾಗ ಪರಮಾತ್ಮನಾಗಿ ಹೇಳಲ್ಪಡುತ್ತಿದ್ದಾನೆ. ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮೂರು ಭಾಗಗಳಾಗಿ ವಿಭಜಿಸಲ್ಪಟ್ಟವನು, ಮೂರು ಸಮಾನ ಭಾಗಗಳಾಗಿ ವಿಭಜಿಸಲ್ಪಡಲಿಲ್ಲ. ಜೀವಾತ್ಮ ಮೂರು ಅಳತೆಗಳು ಹೊಂದಿರುವಾಗ, ಆತ್ಮ ಆರು ಅಳತೆಗಳು ಹೊಂದಿದೆ, ಪರಮಾತ್ಮ ಒಂಭತ್ತು ಅಳತೆಗಳು ಹೊಂದಿದೆಯೆಂದು ಹೇಳಬಹುದು. ಆತ್ಮವನ್ನು ಅಳತೆಬದ್ಧವಾಗಿ ತೆಗೆದುಕೊಂಡು ಅಳತೆಮಾಡಿ ನೋಡಿದರೆ, ಜೀವಾತ್ಮ '3', ಆತ್ಮ '6', ಪರಮಾತ್ಮ '9' ಆಗಿ ಇರುವುದರಿಂದ, ಅವುಗಳಿಗೆ ಸಂಖ್ಯೆಗಳನ್ನು ಕೂಡಾ ಜೊತೆ ಸೇರಿಸಿ, ಆಯಾ ಆತ್ಮಗಳಿಗೆ, ಆ ಸಂಖ್ಯೆಗಳನ್ನು ಗುರುತಾಗಿ ಹೇಳುತ್ತಿದ್ದೇವೆ. ಆತ್ಮವನ್ನು ಕುರಿತು ಹೇಳಬೇಕಾದ ಕಡೆ, ಆರು (6) ಅಂಕೆಯನ್ನಿಟ್ಟು ತೋರಿಸಿದರೇ ಸರಿಹೋಗುತ್ತದೆ. ಹಾಗೇ ಜೀವಾತ್ಮಗೆ, ಮೂರು (3) ಸಂಖ್ಯೆಯನ್ನು ತೋರಿಸಿದರೆ ಸರಿಹೋಗುತ್ತದೆ. ಪರಮಾತ್ಮ ಒಂದರ ಪ್ರಸ್ತಾವನೆ ಬಂದಾಗ, ಒಂಭತ್ತು (9) ಸಂಖ್ಯೆಯನ್ನು ಬರೆದರೆ ಸರಿಹೋಗುತ್ತದೆ.

ಮೂರು ಆತ್ಮಗಳನ್ನು ತಿಳಿದಾಗ, ಪರಮಾತ್ಮ, ಆತ್ಮ, ಜೀವಾತ್ಮಯೆಂದು ಹೇಳುವುದಕ್ಕೆ 9,6,3 ಎಂದು ಹೇಳಬಹುದು. ಈ ಮೂರು ಆತ್ಮಗಳು ಒಂದೇ ಪರಮಾತ್ಮನಿಂದ ಬಂದಿರುವವೆಂದು ತಿಳಿದುಕೊಂಡಿದ್ದೇವೆ ಅಲ್ಲವೇ! ಪರಮಾತ್ಮ ವಿಭಜಿಸಲ್ಪಡದ ಮೊದಲಾಗಲಿ, ವಿಭಜಿಸಲ್ಪಟ್ಟ ನಂತರವಾಗಲಿ ಒಂದೇ ಬೆಲೆ ಹೊಂದಿದ್ದಾನೆ. ಮೊದಲು ಹೇಗಿದ್ದಾನೊ ಹಾಗೇ ಇರುತ್ತಾ, ತನಗಿಂತ ಮೂರರಷ್ಟು ಕಡಿಮೆ ಇರುವ ಆತ್ಮವನ್ನು ತಯಾರು ಮಾಡಿ, ಆತ್ಮಗಿಂತ ಮೂರರಷ್ಟು ಕಡಿಮೆ ಇರುವ ಜೀವಾತ್ಮವನ್ನು ತಯಾರು ಮಾಡಿದ್ದಾನೆ. ಆ ವ್ಯತ್ಯಾಸಗಳು 9, 6, 3ರಲ್ಲಿ ಸುಲಭವಾಗಿ ತಿಳಿಯುತ್ತಿವೆ. ಮೂರು ಭಾಗಗಳ ವ್ಯತ್ಯಾಸದಿಂದ ಮೂರು ಆತ್ಮಗಳನ್ನು ಕುರಿತು. ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ, 16, 17ನೇ ಶ್ಲೋಕದಲ್ಲಿ ಭಗವಂತನು ವಿವರವಾಗಿ ಹೇಳಿದ್ದಾನೆ.

**16. ಶ್ಲೋ॥ ದ್ವಾ ವಿಮೌ ಪುರುಷೌ ಲೋಕೇ ಕ್ಷರ ಶ್ಚಾಕ್ಷರ ಏವಚ॥**
**ಕ್ಷರ ಸ್ಸರ್ವಾಣಿ ಭೂತಾನಿ ಕೂಟಸ್ಥೋಕ್ಷರ ಉಚ್ಛ್ಯತೇ॥**

**17. ಶ್ಲೋ॥ ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇ ತ್ಯುದಾಹೃತಃ।**
**ಯೋ ಲೋಕತ್ರಯ ಮಾವಿಶ್ಯ ಬಿಭರ್ತವ್ಯಯ ಈಶ್ವರಃ ॥**

**ಭಾವಾರ್ಥ :–** "ಲೋಕದಲ್ಲಿನ ಪುರುಷರಲ್ಲಿ ಕ್ಷರನು, ಅಕ್ಷರನು ಎನ್ನುವ ಎರಡು ವಿಧಗಳ ಪುರುಷರಿದ್ದಾರೆ. ಸರ್ವಜೀವರಾಶಿಗಳು ಕ್ಷರ ಪುರುಷರಾಗಿ ಇರುವಾಗ, ಅಕ್ಷರ ಪುರುಷನು, ಕ್ಷರಪುರುಷರಾದ ಜೀವರಾಶಿಗಳೊಂದಿಗೆ ಕೂಡಿಕೊಂಡಿದ್ದಾನೆ."

"ಉತ್ತಮವಾದ ಪುರುಷನು, ಇಬ್ಬರ ಪುರುಷರಿಗಿಂತ ಪ್ರತ್ಯೇಕವಾಗಿದ್ದಾನೆ. ಪರಮಾತ್ಮನಾಗಿರುವ ಮೂರನೆಪುರುಷನು ಮೂರು ಲೋಕಗಳು ಆವರಿಸಿ ಎಲ್ಲದಕ್ಕು ಅಧಿಪತಿಯಾಗಿ, ನಾಶವಿಲ್ಲದ ಅವ್ಯಯನಾಗಿದ್ದಾನೆ." ಇದು ಮೇಲಿನ ಶ್ಲೋಕದಲ್ಲಿನ ಸಮಾಚಾರ. ಈ ಸಮಾಚಾರದ ಪ್ರಕಾರ ಪ್ರತಿ ಮನುಷ್ಯನಲ್ಲಿ ಮೂರು ಆತ್ಮಗಳಿವೆಯೆಂದು ತಿಳಿಯುತ್ತಿದೆ. ಈ ವಿಷಯವನ್ನು ತಿಳಿದ ಜ್ಞಾನಿ ಇನ್ನೊಬ್ಬನೊಂದಿಗೆ 'ನಿನಗು ಮೂರು ಆತ್ಮಗಳಿವೆ, ನಿನ್ನ ತಾತನಿಗು ಮೂರು ಆತ್ಮಗಳಿವೆಯೆಂದು' ಹೇಳುತ್ತಾ, ನಿನಗೂ ಬೆಬ್ಬೆಬ್ಬೇ, ನಿನ್ನ ತಾತನಿಗೂ ಬೆಬ್ಬೆಬ್ಬೇ

ಎಂದಿದ್ದಾನೆ. ಇಲ್ಲಿ ಚೆನ್ನಾಗಿ ಗಮನಿಸಿದರೇ. ನಿನಗೂ ಬೆಬ್ಬೆಬ್ಬೇ ಎಂದಾಗ ಮೊದಲು ಹೇಳಿರುವುದು "ಬೆ" ಮಾತ್ರವೆ. ಅದನ್ನು ಜೀವಾತ್ಮವಾಗಿ ಹೋಲಿಸಿ ಹೇಳಿಕೊಳ್ಳಬಹುದು. ಎರಡನೆ ಅಕ್ಷರ 'ಬ್ಬೆ' ಎಂದು ಇದೆ. ಮೊದಲಿನ ಅಕ್ಷರಕ್ಕು ಎರಡನೆ ಅಕ್ಷರಕ್ಕು ಸ್ವಲ್ಪ ವ್ಯತ್ಯಾಸ ಕಾಣಿಸುತ್ತಿದೆ. ಮೊದಲನೆಯದು "ಬೆ" ಆಗಿದ್ದು, ಎರಡನೆಯದು "ಬೆ" ಕೆಳಗೆ 'ಬ' ವತ್ತು ಬಂದ "ಬ್ಬೆ"ಯಾಗಿ ಇದೆ. ಎರಡನೆಯದು ವತ್ತು 'ಬ್ಬೆ' ಆಗಿದೆ. ಆದ್ದರಿಂದ ಎರಡನೆ ಅಕ್ಷರದಲ್ಲಿ ವ್ಯತ್ಯಾಸ ಹೊಂದಿರುವ 'ಬ್ಬೆ' ಅನ್ನು ಆತ್ಮದೊಂದಿಗೆ ಹೋಲಿಸಿ ಹೇಳುವುದಾಗಿದೆ. ಇನ್ನು ಮೂರನೆ ಅಕ್ಷರವನ್ನು ನೋಡಿದರೆ, ಎರಡನೆ ಅಕ್ಷರಕ್ಕಿಂತ ಸ್ವಲ್ಪ ವ್ಯತ್ಯಾಸ ಇರುವಂತೆ ತಿಳಿಯುತ್ತಿದೆ. ಮೂರನೆಯದು "ಬ್ಬೆ" ಎನ್ನುವುದರಿಂದ ಮೂರನೆಯದಕ್ಕೆ ದೀರ್ಘ ಕೂಡಾ ಬಂದಿದೆ. ಆದ್ದರಿಂದ ಮೊದಲಿಗಿರುವ ಬೆ, ಬ್ಬೆ, ಗಿಂತ ಬ್ಬೇ ದೊಡ್ಡದಾಗಿರುವುದರಿಂದ ಆ ಅಕ್ಷರವನ್ನು ಪರಮಾತ್ಮನಾಗಿ ಹೋಲಿಸಿಕೊಳ್ಳುವುದಾಗಿದೆ. ಈಗ ಜೀವಾತ್ಮ, ಆತ್ಮ, ಪರಮಾತ್ಮರನ್ನು ಬೆ, ಬ್ಬೆ, ಬ್ಬೇ ಮೂರು ಬೇರೆಬೇರೆ ವ್ಯತ್ಯಾಸಗಳು ಹೊಂದಿದ ಅಕ್ಷರಗಳೊಂದಿಗೆ ಹೇಳುವುದಾಗಿದೆ. ಕ್ಷರ, ಅಕ್ಷರ, ಪುರುಷೋತ್ತಮ ಎನ್ನುವ ಮೂರು ಆತ್ಮಗಳೇ ಆಗಿರುವುದರಿಂದ ಒಂದೇ ಶಬ್ದದಿಂದಲೇ ಹೇಳುವುದಾಗಿದೆ. ಒಂದೇ ಅಕ್ಷರ ಶಬ್ದದಲ್ಲಿ ಮೂರು ವ್ಯತ್ಯಾಸಗಳು ನೋಡಿ ಒಂದಕ್ಕೆ ಏತ್ವ, ಎರಡನೆಯದಕ್ಕೆ ವತ್ತು, ಮೂರನೆಯದಕ್ಕೆ ದೀರ್ಘವನ್ನು ಜೋಡಿಸಿ, ಬೆ, ಬ್ಬೆ, ಬ್ಬೇ ಎನ್ನುವ ಮೂರು ವಿಧಗಳಿಂದ ಹೇಳುವುದರಲ್ಲಿ, ಒಂದೇ ಆತ್ಮ ಮೂರು ವಿಧಗಳಾಗಿ ಇವೆಯೆಂದು ಸುಲಭವಾಗಿ ಎಲ್ಲರಿಗೂ ಅರ್ಥವಾಗಿಹೋಗುತ್ತದೆ. ಮಗನಾಗಿ ಇರುವವನಲ್ಲಿಯೂ, ಮಗ ತಂದೆಯಾಗಿರುವವನಲ್ಲಿಯೂ, ಆ ತಂದೆಗೆ ತಂದೆಯಾಗಿರುವವನಲ್ಲಿಯೂ ಮೂರು ಆತ್ಮಗಳು ಇರುವುದರಿಂದ ನಿನಗೂ ನಿನ್ನ ತಾತನಿಗೂ ಎಂದು ಇಬ್ಬರನ್ನು ಹೇಳುವುದಾಗಿದೆ. ಇಬ್ಬರನ್ನೇ ಅಲ್ಲ ಯಾರನ್ನಾದರೂ ಹಾಗೇ ಹೇಳಬಹುದು. ಎಲ್ಲರಲ್ಲಿ ಮೂರು ಆತ್ಮಗಳಿರುವು ದರಿಂದ, ಎಲ್ಲರಿಗೂ ಮೂರು ಅಕ್ಷರಗಳ ಶಬ್ದಗಳು ಸರಿಹೋಗುತ್ತವೆ. ಗಾದೆಯಲ್ಲಿ ನಿನಗೆ ಬೆ, ಬ್ಬೆ, ಬ್ಬೇ ಎಂದು ಇರುವಾಗ, ನಾವು ನಿನಗೂ, ನಿನ್ನ ಅಪ್ಪನಿಗು, ನಿನ್ನ ತಾತನಿಗೂ, ಎಲ್ಲರಿಗೂ ಬೆ,ಬ್ಬೆ,ಬ್ಬೇ ಎಂದು ಹೇಳಬಹುದು. ಈ ಗಾದೆ

ಮೂರು ಆತ್ಮಗಳ ಜ್ಞಾನದಿಂದ ಕೂಡಿಕೊಂಡಿರುವುದರಿಂದ ಇದನ್ನು ಯಾರ ಹತ್ತಿರವಾದರೂ ಬಳಸಿಕೊಳ್ಳಬಹುದು. ಈಗ ನಾನು ಹೇಳುವುದು ಏನೆಂದರೇ ನನಗು ಬೆ,ಬ್ಬೆ,ಬ್ಬೇ ನಿನಗು ಬೆ,ಬ್ಬೆ,ಬ್ಬೇ ಸರಿಹೋಗಿದೆಯಾ?

## 16. ನೀನು ಉಳುವುದರಲ್ಲಿ ಏನಿದೆ, ಇರುವುದೆಲ್ಲಾ ನಾನು ಚೆಲ್ಲುವುದರಲ್ಲಿಯೇ ಇದೆ.

ಒಂದು ಊರಿನಲ್ಲಿ ದಾಮೋದರ್ ಎನ್ನುವವನು, ತನ್ನ ಹತ್ತು ಎಕರೆಗಳ ಹೊಲವನ್ನು ಐದುಸಲ ಉಳುಮೆ ಮಾಡಿ, ತನ್ನ ಭೂಮಿ ಎಲ್ಲವೂ ಮೆತ್ತಗೆಬದಲಾಗಿಹೋಗುವಂತೆ ಮಾಡಿದ್ದಾನೆ. ದಾಮೋದರ್ ಹೊಲವನ್ನು ನೋಡಿದವರೆಲ್ಲರೂ ಆತನ ಬೇಸಾಯವನ್ನು ಮೆಚ್ಚಿಕೊಳ್ಳುತ್ತಿದ್ದರು. ಅಷ್ಟರಲ್ಲಿ ಮಳೆ ಬಂದು ಭೂಮಿ ಎಲ್ಲವೂ ಚೆನ್ನಾಗಿ ಹಸಿಯಾಗಿ, ಬೀಜಗಳು ಚೆಲ್ಲುವುದಕ್ಕೆ ಅನುಗುಣವಾಗಿ ಬದಲಾಗಿದೆ. ಆಗ ಬೀಜಗಳು ಚಲ್ಲುವುದಕ್ಕೆ ಪ್ರಕಾಶ್ ಎನ್ನುವಾತನು ಬಂದಿದ್ದಾನೆ. ಪ್ರಕಾಶ್ ಚೆನ್ನಾಗಿ ಉಳುಮೆಮಾಡಿದ ದಾಮೋದರ್ ಹೊಲದಲ್ಲಿ ಬೀಜ ಚೆಲ್ಲಿದ್ದಾನೆ. ನಂತರ ದಾಮೋದರ್ ಪಕ್ಕದಲ್ಲಿಯೇ ಇರುವ, ದಾಮೋದರ್ ತಮ್ಮನಾದ ಫಣೀಂದರ್ ಹೊಲದಲ್ಲಿ ಕೂಡಾ ಬೀಜ ಚೆಲ್ಲಿದ್ದಾನೆ. ದಾಮೋದರ್ ಹೊಲ ಚೆನ್ನಾಗಿ ಉಳುಮೆ ಮಾಡಲ್ಪಟ್ಟಿರುವಾಗ, ಆತನ ತಮ್ಮನಾದ ಫಣೀಂದರ್ ಹೊಲದಲ್ಲಿ ಒಂದುಸಲ ಮಾತ್ರವೇ ಉಳುಮೆಮಾಡಿದ್ದಾನೆ. ಆದ್ದರಿಂದ ಫಣೀಂದರ್ ಭೂಮಿ, ದಾಮೋದರ್ ಭೂಮಿ ಇರುವಷ್ಟು ಮೆತ್ತಗೆ ಇಲ್ಲ. ಆದರೂ ಪ್ರಕಾಶ್, ಎರಡು ಹೊಲಗಳಲ್ಲಿ ಬೀಜವನ್ನು ತನ್ನ ತಿಳುವಳಿಕೆ ಇದ್ದಂತೆ ಚೆಲ್ಲಿದ್ದಾನೆ. ನಂತರ ಸ್ವಲ್ಪ ಕಾಲಕ್ಕೆ ಬೆಳೆ ಬೆಳೆದಿದೆ. ದಾಮೋದರ್ ಹತ್ತು ಎಕರೆಗಳಲ್ಲಿ ಎಷ್ಟು ಬೆಳೆ ಬೆಳೆದಿದೆಯೋ, ಆತನ ತಮ್ಮನಾದ ಫಣೀಂದರ್ ಒಂದರ ಹತ್ತು ಎಕರೆಗಳ ಹೊಲದಲ್ಲಿ ಕೂಡಾ ಅಷ್ಟೇ ಬೆಳೆ ಬೆಳೆದಿದೆ. ಐದು ಸಲ ಬೇಸಾಯ ಮಾಡಿದ ದಾಮೋದರ್‌ಗೆ, ಒಂದುಸಲ ಬೇಸಾಯ ಮಾಡಿದ ಫಣೀಂದರ್‌ಗೆ, ಒಂದೇ ವಿಧವಾದ ಬೆಳೆ ಸಮಾನವಾಗಿ ಬೆಳೆಯುವುದು, ದಾಮೋದರ್‌ಗೆ ಏನೂ ಅರ್ಥವಾಗಲಿಲ್ಲ. ಎರಡು ಹೊಲಗಳಲ್ಲಿ ಬೀಜಗಳು

ಚೆಲ್ಲಿದವನು ಪ್ರಕಾಶ್ ಆಗಿರುವುದರಿಂದ, ಆ ವಿಷಯವನ್ನು ದಾಮೋದರ್ ಪ್ರಕಾಶ್‌ನನ್ನು ಕೇಳಿದ್ದಾನೆ. ಆಗ ಸಾವಧಾನವಾಗಿ ದಾಮೋದರ್ ಹೇಳಿದ ವಿಷಯವನ್ನು ಕೇಳಿದ ಪ್ರಕಾಶ್, ದಾಮೋದರ್‌ನೊಂದಿಗೆ ಹೀಗೆ ಹೇಳಿದ್ದಾನೆ.

**ಪ್ರಕಾಶ್ :–** ನೀನು ನಿನ್ನ ಹೊಲದಲ್ಲಿ ಐದುಸಲ ಉಳುಮೆಮಾಡಿ ಚೆನ್ನಾಗಿ ಮೆತ್ತಗೆ ಮಾಡಿದ್ದೀಯಾ. ಅದರಿಂದ ಬೆಳೆ ಚೆನ್ನಾಗಿ ಬೆಳೆಯಬೇಕು. ನಿನಗೆ ಈಗ, ನೀನು ಪಟ್ಟಿರುವ ಶ್ರಮಕ್ಕೆ ತಕ್ಕಂತೆ ಚೆನ್ನಾಗಿ ಬೆಳೆ ಬೆಳೆದಿದೆ ಅಲ್ಲವೇ!

**ದಾಮೋದರ್ :–** ನಾನು ಮಾಡಿದ ಬೇಸಾಯಕ್ಕೆ, ಒಂದು ಎಕರೆಗೆ ಹತ್ತು ಮೂಟೆಗಳು ಬೆಳೆಯಬೇಕು. ಹಾಗೆ ನಾನು ಅಂದುಕೊಂಡಹಾಗೆ ಬೆಳೆದಿವೆ. ಆದರೇ ಒಂದುಸಲ ಮಾತ್ರವೇ ಉಳುಮೆಮಾಡಿದ ನನ್ನ ತಮ್ಮನಿಗೆ ಕೂಡಾ, ಎಕರೆಗೆ ಹತ್ತು ಮೂಟೆಗಳು ಬೆಳೆದಿವೆ. ಅದು ಹೇಗೆ ಬೆಳೆದಿವೆ?

**ಪ್ರಕಾಶ್ :–** ನೀವು ಉಳುಮೆ ಮಾಡುವುದರಲ್ಲಿ ಏನಿದೆ? ಇರುವುದೆಲ್ಲಾ ನಾನು ಚೆಲ್ಲುವುದರಲ್ಲಿದೆ. ನಾನು ಚೆಲ್ಲಿದ ಕೈ ಚಳಕದಿಂದ ಬೆಳೆ ಬೆಳೆದಿದೆ. ನೀವು ಮಾಡಿದ ಬೇಸಾಯದಿಂದಲೇ ಬೆಳೆ ಬೆಳೆಯುತ್ತದೆಂದುಕೊಳ್ಳುವುದು ತಪ್ಪು.

**ದಾಮೋದರ್ :–** ಆದರೇ ಬೀಜ ಚೆಲ್ಲಿರುವುದು ನೀನೇ ಅಲ್ಲವೇ! ನಿನ್ನ ಕೈಚಳಕದಿಂದ ಒಂದುಸಲ ಉಳುಮೆ ಮಾಡಿದವನಿಗೆ, ಎಕರೆಗೆ ಹತ್ತುಮೂಟೆಗಳು ಬೆಳೆದರೇ ಐದುಸಲ ಬೇಸಾಯ ಮಾಡಿದವನಿಗೆ, ಎಕರೆಗೆ ಐವತ್ತು ಮೂಟೆಗಳು ಬೆಳೆಯಬೇಕು ಅಲ್ಲವೇ! ಹಾಗೆ ಬೆಳೆಯದೆ, ಇಬ್ಬರಿಗೂ ಸಮಾನವಾಗಿ ಬೆಳೆದಿವೆ ಅಲ್ಲವೇ!

**ಪ್ರಕಾಶ್ :–** ಬೆಳೆದ ಬೆಳೆ, ಎಕರೆಗೆ ಹತ್ತು ಮೂಟೆಗಳಿಗಿಂತ ಹೆಚ್ಚಾಗಿ ಬೆಳೆಯುವುದಿಲ್ಲ. ಅದು ಬೇಸಾಯ ಚೆನ್ನಾಗಿ ಮಾಡಿದ ಹೊಲದಲ್ಲಿಯೇ ಹಾಗೆ ಬೆಳೆಯುತ್ತದೆ. ನಿನ್ನ ತಮ್ಮನ ಹೊಲದಲ್ಲಿ ಆದರೇ, ಎಕರೆಗೆ ಎರಡು ಮೂಟೆಗಳೆ ಬೆಳೆಯಬೇಕಾಗಿದೆ. ಆತನು ಒಂದುಸಲ ಬೇಸಾಯ ಮಾಡಿರುವುದರಿಂದ, ಅದಕ್ಕಿಂತ ಹೆಚ್ಚಾಗಿ ಬೆಳೆಯುವುದಕ್ಕೆ ಸಾಧ್ಯವಿಲ್ಲ. ಆದರೇ ಬೀಜ ಚೆಲ್ಲಿದ ನನ್ನ ಕೆಲಸದ ಮೇಲೆ ಆಧಾರಪಟ್ಟು ಆತನ ಹೊಲದಲ್ಲಿ ಹೆಚ್ಚಾಗಿ ಬೆಳೆ ಬಂದಿದೆ.

ಆತನ ಹೊಲ ಮೆತ್ತಗೆ ಇಲ್ಲ ಆದ್ದರಿಂದ ಬೀಜವನ್ನು ಚೆಲ್ಲುವ ಸಮಯದಲ್ಲಿ, ಬೀಜಗಳು ತಕ್ಕ ಆಳದಲ್ಲಿ **ಬೀಳುವಂತೆ ಭೂಮಿಗೆಹಾಕಿ ಬೀಜಗಳನ್ನು ಬಿಸಾಡಿರುವುದು ನಡೆದಿದೆ**. ಹಾಗೆ ಬಲವಾಗಿ ಬೀಜಗಳನ್ನು, ಭೂಮಿಮೇಲಕ್ಕೆ ಬಿಸಾಡಿರುವುದರಿಂದ ಭೂಮಿಯಲ್ಲಿ ಅವು ತಕ್ಕ ಆಳದಲ್ಲಿ ಬಿದ್ದು ಸರಿಯಾದ ಬೆಳೆಯನ್ನು ಕೊಟ್ಟಿವೆ. ನಿನ್ನ ಹೊಲ ಮೆತ್ತಗೆ ಇರುವುದರಿಂದ, ನಾನು **ಬೀಜಗಳನ್ನು ಮೇಲಕ್ಕೆ ಚೆಲ್ಲುವುದರಿಂದ,** ಅವು ಎಷ್ಟು ಆಳದೊಳಗೆ ಹೋಗಬೇಕೊ ಅಷ್ಟೇ ಆಳದೊಳಗೆ ಹೋಗಿ, ಮೊಳಕೆಬಂದು ಬೆಳೆಯನ್ನು ಕೊಟ್ಟಿವೆ. ಒಂದುವೇಳೆ ಆತನ ಹೊಲದಲ್ಲಿ ಬೀಜಗಳನ್ನು ಚೆಲ್ಲಿದಂತೆ, ನಿನ್ನ ಹೊಲದಲ್ಲಿ ಚೆಲ್ಲಿದ್ದರೆ, ಭೂಮಿ ಮೆತ್ತಗೆ ಇರುವುದರಿಂದ, ಬೀಜಗಳು ಬಹಳ ಆಳದಲ್ಲಿ ಬಿದ್ದು, ತಕ್ಕ ಸಮಯಕ್ಕೆ ಮೊಳಕೆಬಂದು ಹೊರಗೆ ಬರಲಾರದೆ, ಬೆಳೆಯನ್ನು ಸರಿಯಾಗಿ ಬೆಳೆಯದೆ ನಷ್ಟ ಬರುತ್ತಿತ್ತು. ಹಾಗಲ್ಲದೆ, ನಿನ್ನ ಹೊಲದಲ್ಲಿ ಬೀಜಗಳನ್ನು ಮೇಲಕ್ಕೆ ಹಾಕುವುದು ನಡೆದಿದೆ. ನಿನ್ನ ತಮ್ಮನ ಹೊಲದಲ್ಲಿ ಭೂಮಿಗೆ ಹಾಕುವುದರಲ್ಲೇ ಸ್ವಲ್ಪ ಆಳವಾಗಿ ಚೆಲ್ಲುವುದು ನಡೆದಿದೆ.

**ದಾಮೋದರ್ :–** ಆದರೇ ನಾನು ಹೆಚ್ಚಾಗಿ ಉಳುಮೆಮಾಡಿರುವುದಕ್ಕಿಂತ, ನೀನು ಚೆಲ್ಲಿದ ಕೆಲಸವೇ ಹೆಚ್ಚಾಗಿದೆ.

**ಪ್ರಕಾಶ್ :–** ಹೌದು. ನೀನು ಪಟ್ಟ ಶ್ರಮಕ್ಕೆ ಸರಿಹೋಗುವ ಬೆಳೆ ಬಂದಿದೆ. ನಿನ್ನ ತಮ್ಮನು ಕಡಿಮೆ ಶ್ರಮಪಟ್ಟರೂ, ಒಂದುಸಲವೇ ಉಳುಮೆಮಾಡಿದರೂ, ಆತನಿಗು ಕೂಡಾ ಒಳ್ಳೆಯ ಬೆಳೆ ಬರುವಂತೆ ಬೀಜಗಳನ್ನು ಚೆಲ್ಲಿದ್ದೇನೆ. ಆದ್ದರಿಂದ ಉಳುಮೆ ಮಾಡುವವನ ಕೆಲಸಕ್ಕಿಂತ, ಬೀಜವನ್ನು ಚೆಲ್ಲುವವನ ಕೆಲಸವೇ ಹೆಚ್ಚೆಂದು ಹೇಳುತ್ತಿದ್ದೇನೆ. ನಾನು ಹೇಳುವುದೇ ಅಲ್ಲದೇ ನನ್ನ ಮಾತು ನಿಜವೆಂದು ಪ್ರತ್ಯಕ್ಷವಾಗಿ ತಿಳಿದಿದೆ ಅಲ್ಲವೇ!

ಈಗ ಅಸಲು ವಿಷಯಕ್ಕೆ ಬರೋಣ. ಈ ಗಾದೆಯಲ್ಲಿ ಉಳುಮೆ ಮಾಡುವುದು, ಬೀಜಗಳು ಚೆಲ್ಲುವುದು ಮಾತ್ರವೇ ಕಾಣಿಸಿದರೂ, ಈ ಗಾದೆವೊಂದರ ಅಸಲು ಉದ್ದೇಶ ಬೇರೆ. ಜಿಜ್ಞಾಸೆ ಹೊಂದಿದವರು ಜ್ಞಾನಕ್ಕಾಗಿ ಪಡುವ ಶ್ರಮಕ್ಕಿಂತ ಭಗವಂತನು ನೀಡುವ ವಿಧಾನದಿಂದಲೇ ಹೆಚ್ಚಾಗಿ ಜ್ಞಾನ

ಉಂಟಾಗುತ್ತಿದೆ. ಉದಾಹರಣೆಗೆ ಹೇಳಿಕೊಂಡರೆ, ಜ್ಞಾನ ತಿಳಿಯಬೇಕೆನ್ನುವ ಜಿಜ್ಞಾಸೆ ಹೊಂದಿದವನು ಒಬ್ಬನು, ಎಷ್ಟೋ ಊರುಗಳು ಸುತ್ತಿ ಒಬ್ಬ ಗುರುವನ್ನು ಆಶ್ರಯಿಸಿದ್ದಾನೆ. ಆ ಗುರು ಜ್ಞಾನವನ್ನೇ ಹೇಳುವಂತೆ ಎಷ್ಟೋ ಉಪನ್ಯಾಸಗಳನ್ನು ಹೇಳಿದರೂ, ಅದರಲ್ಲಿ ಆತ್ಮಜ್ಞಾನ ಸ್ವಲ್ಪವಾದರೂ ಇಲ್ಲ. ಆತನ ಪುರಾಣಗಳ ಕಥೆಗಳನ್ನು ಹೇಳುವುದೂ, ಭಕ್ತಿ ರಸ ಹಾಡುಗಳನ್ನು ಹಾಡುವುದೂ, ಮಂತ್ರೋಪದೇಶ ಮಾಡುವುದೂ, ಧ್ಯಾನದಲ್ಲಿ ಕೂಡಿಸಿ ಧ್ಯಾನ ಸಾಧನೆ ಮಾಡಿಸುವುದು ನಡೆಯುತ್ತಿತ್ತು. ಆ ವಿಧವಾಗಿ ಕೆಲವು ವರ್ಷಗಳು ನಡೆದಿದೆ. ಆ ಗುರುವನ್ನು ಆಶ್ರಯಿಸಿದವರೆಲ್ಲರಿಗೂ ನಾವು ಧ್ಯಾನ ಮಾಡುತ್ತಿದ್ದೇವೆನ್ನುವ ತೃಪ್ತಿ ಇರುತ್ತಿತ್ತು. ಅಷ್ಟರಲ್ಲಿ ಅವರಿಗೆ ಒಬ್ಬ ವ್ಯಕ್ತಿ ತಟಸ್ಥವಾಗಿ, ಆತ್ಮಜ್ಞಾನವನ್ನು ಕುರಿತು ಅವರಿಗೆ ತಿಳಿಯದೆಂದು ಗ್ರಹಿಸಿ, ಯಾರಿಗೆ ಹೇಗೆ ಹೇಳಬೇಕೊ ಹಾಗೆ ಹೇಳುವುದಕ್ಕೆ ಆರಂಭಮಾಡುತ್ತಾನೆ. ಮೊದಲು, ಅವರಲ್ಲಿ ಎಷ್ಟೋ ಪ್ರಶ್ನೆಗಳನ್ನು ಉತ್ಪನ್ನವಾಗುವಂತೆ ಮಾಡಿ, ಆ ಪ್ರಶ್ನೆಗಳಿಗೆ ತಮಗೆ ಉತ್ತರ ತಿಳಿಯದೆಂದು ಅವರಿಗೆ ಅರ್ಥವಾಗುವಂತೆ ಮಾಡಿ, ಅವರ ಧ್ಯಾಸವನ್ನು ಉತ್ತರಕ್ಕಾಗಿ ಮರಳಿಸಿ, ಜ್ಞಾನವನ್ನು ಹೇಳಿದಾಗ! ಆಗ ಅವರಿಗೆ ಪೂರ್ತಿಯಾಗಿ ಜ್ಞಾನ ಅರ್ಥವಾಗಿದೆ. ನಾವು ತಿಳಿದವರೆಂದು, ಧ್ಯಾನ ಕೂಡಾ ಮಾಡುತ್ತಿದ್ದೇವೆಂದು, ತಮ್ಮನ್ನು ತಾವು ದೊಡ್ಡದಾಗಿ ತಿಳಿದುಕೊಂಡು ಇರುವವರಿಗೆ, ಜ್ಞಾನಮಾರ್ಗದಲ್ಲಿ ಅನುಮಾನಗಳನ್ನು ಹುಟ್ಟಿಸಿ, ಅವುಗಳ ವಿಷಯ ತಮಗೆ ತಿಳಿಯದೆಂದು ಕೊಳ್ಳುವಂತೆ ಮಾಡಿ, ನಂತರ ಜ್ಞಾನವನ್ನು ಹೇಳುವುದರಿಂದ ಎಲ್ಲರೂ ಜ್ಞಾನಿಗಳಾಗಿ ಬದಲಾಗಿಹೋಗಿ, ಮೊದಲ ಗುರು ಹತ್ತಿರ ಏನು ಲಭಿಸಲಿಲ್ಲವೆಂದು ಕೊಳ್ಳುವಂತೆ ಮಾಡಿದ್ದಾನೆ. ಇದನ್ನನುಸರಿಸಿ ನೋಡಿದರೆ, ಕೇಳುವವನ ಶ್ರಮಕ್ಕಿಂತ ಹೇಳುವವನ ಕೆಲಸ ಹೆಚ್ಚಾಗಿರಬೇಕೆಂದು ತಿಳಿಯುತ್ತಿದೆ. ಕೇಳುವ ಶಿಷ್ಯರು ಉಳುಮೆ ಮಾಡಿದ ರೈತರಂತಹವರು. ಹೇಳುವ ಬೋಧಕನು ಬೀಜವನ್ನು ಚೆಲ್ಲುವಂತಹವನು. ಉಳುಮೆ ಮಾಡುವವನಿಗಿಂತ ಹದವನ್ನು ನೋಡಿ, ಅವಶ್ಯಕತೆಯನ್ನು ಅನುಸರಿಸಿ ಬೀಜವನ್ನು ಬಿತ್ತುವವನೇ ದೊಡ್ಡವನು. ಹಾಗೇ ತಿಳಿದುಕೊಳ್ಳುವ ಶಿಷ್ಯರಿಗಿಂತ ತಿಳಿಹೇಳುವ ಗುರು ಶ್ರೇಷ್ಠವಾದವನು. ಕೇಳುವವನಿಗಿಂತ ಹೇಳುವವನದ್ದೇ ಹೆಚ್ಚು ಕೆಲಸ. ಆದ್ದರಿಂದ ಆ ವಿಷಯವನ್ನು,

"ನಿನ್ನ ಉಳುಮೆಯಲ್ಲಿ ಏನಿದೆ, ಇರುವುದೆಲ್ಲಾ ನಾನು ಚೆಲ್ಲುವುದರಲ್ಲಿ ಇದೆ." ಎಂದು ಗಾದೆ ರೂಪದಲ್ಲಿ ಹೇಳಿದ್ದಾರೆ.

## 17. ಪಕ ಪಕ ನಗುವವನೊಬ್ಬನು, ಗಬ ಗಬ ಅರಚುವವನೊಬ್ಬನು, ಮಿಟ ಮಿಟ ನೋಡುವವನೊಬ್ಬನು

ಒಂದು ಕಡೆ ಒಂದು ಸಭೆ ನಡೆಯುತ್ತಿತ್ತು. ಆ ಸಭೆಯಲ್ಲಿ ಒಬ್ಬ ಮುಖ್ಯ ಅತಿಥಿ ಒಬ್ಬಾತನು ಇದ್ದನು. ಆ ಸಭೆಯಲ್ಲಿ ಒಬ್ಬ ಉಪನ್ಯಾಸಕನಿದ್ದನು. ಸಭೆ ನಡೆಯುತ್ತಿರುವ ಸಮಯದಲ್ಲಿ, ಉಪನ್ಯಾಸಕನು ಅಲ್ಲಿನ ಸಮಸ್ಯೆಗಳನ್ನು ಕುರಿತು ಸಂದರ್ಭಾನುಸಾರವಾಗಿ, ಚಾಕಚಕ್ಯವಾಗಿ ಮಾತನಾಡುತ್ತಿದ್ದನು. ಆ ಉಪನ್ಯಾಸ ಹೇಳುವ ವ್ಯಕ್ತಿ ಮಾತುಗಳಿಗೆ, ಅಲ್ಲಿ ಕುಳಿತುಕೊಂಡ ಪ್ರಜೆಗಳು ಆಗಾಗ ಚಪ್ಪಾಳೆ ಹೊಡೆಯುತ್ತಾ ಪಕ ಪಕ ನಗುತ್ತಿದ್ದರು. ಮಾತನಾಡುವ ವ್ಯಕ್ತಿ, ಗಬ ಗಬ ಮಾತನಾಡುತ್ತಿದ್ದನು. ಆ ಸಭೆಗೆ ಮುಖ್ಯ ಅತಿಥಿಯಾಗಿ ಬಂದವನು, ಹೇಳುವವನ ಕಡೆ, ಕೇಳಿ ನಗುವವರ ಕಡೆ ಮಿಟ ಮಿಟ ನೋಡುತ್ತಿದ್ದನು. ಮಾತುಗಳು ಕೇಳಿ, ಚಪ್ಪಾಳೆ ಹೊಡೆದು, ನಗುವ ಪ್ರಜೆಗಳು ಮುಂದೆ ಕುಳಿತುಕೊಂಡಿರುವಾಗ, ಉಪನ್ಯಾಸವನ್ನು ಹೇಳುವ ವ್ಯಕ್ತಿ ಪ್ರಜೆಗಳಿಗೆ ಎದುರುಗಡೆ ನಿಂತು ಹೇಳುತ್ತಿದ್ದನು. ಮುಖ್ಯ ಅತಿಥಿ ಕೂಡಾ ಪಕ್ಕದ ಕುರ್ಚಿಯಲ್ಲಿ ಕುಳಿತುಕೊಂಡು, ಹೇಳುವುದೆಲ್ಲವನ್ನು ಕೇಳುತ್ತಿದ್ದಾನೆ. ಕೆಳಗೆ ಕುಳಿತುಕೊಂಡ ಪ್ರಜೆಗಳು, ತಾವು ಕೇಳಿದ ಮಾತುಗಳಲ್ಲಿನ ಆನಂದವನ್ನು ಅನುಭವಿಸುತ್ತಾ, ಆಗಾಗ ನಗುತ್ತಿರುವಾಗ, ಅತಿಥಿಯಾಗಿ ಅಲ್ಲಿರುವ ವ್ಯಕ್ತಿ ಕೂಡಾ ತಾನು ಏನು ಮಾಡದಂತೆ ಸುಮ್ಮನೆ ಕೂಳಿತುಕೊಂಡು, ಹೇಳುವವನನ್ನು, ಕೇಳುವವರನ್ನು ಇಬ್ಬರನ್ನು ನೋಡುತ್ತಿದ್ದನು. ಉಪನ್ಯಾಸಕನು ಮಾತ್ರ ಮಾತನಾಡುವ ಕೆಲಸವನ್ನು ಮಾಡುತ್ತಿದ್ದನು. ಇದೆಲ್ಲವೂ ನೋಡಿದರೆ, ನಮಗೆ ಮೂರು ಪಾತ್ರಗಳು ಕಾಣಿಸುತ್ತಿವೆ. ಒಬ್ಬನು ಹೇಳುವ ಕೆಲಸವನ್ನು ಮಾಡುತ್ತಿರುವಾಗ, ಕೇಳಿ ಆನಂದಿಸುವವನು ಒಬ್ಬನಿರುವಾಗ, ಹೇಳುವವನನ್ನು ಕೇಳಿ ಸಂತೋಷ ಪಡುವವರನ್ನು ನೋಡುವವನು ಮತ್ತೊಬ್ಬನಿದ್ದಾನೆ. ಎರಡು ಪಾತ್ರಗಳು ಕೆಲಸ

ಇಲ್ಲದೆ ಇರುವಾಗ, ಒಂದು ಪಾತ್ರ ಮಾತ್ರ ಅರಚಿ ಹೇಳುವ ಕೆಲಸವನ್ನು ಮಾಡುತ್ತಿದೆ.

ಇಂತಹ ಮೂರು ಪಾತ್ರಗಳು ಹೊರಗೆ ಹೇಗಿವೆಯೋ, ಹಾಗೇ ನಮ್ಮ ಶರೀರದಲ್ಲಿ ಕೂಡಾ ಇವೆ. ಶರೀರ ಪ್ರಾಂಗಣದಲ್ಲಿ ಉಪನ್ಯಾಸಕನಂತೆ ಆತ್ಮ ಇರುವಾಗ, ಕೇಳಿ ಅನುಭವಿಸುವವನಂತೆ ಜೀವಿ ಇರುವಾಗ, ಹೇಳುವವನನ್ನು, ಕೇಳುವವನನ್ನು ಇಬ್ಬರನ್ನು ನೋಡಿ ಅತಿಥಿಯಂತೆ ಪರಮಾತ್ಮ ಇದ್ದಾನೆ. ಶರೀರದಲ್ಲಿ ಜೀವಾತ್ಮ, ಪರಮಾತ್ಮ ಇಬ್ಬರೂ ಕೆಲಸ ಮಾಡುವವರಲ್ಲ. ಜೀವಾತ್ಮ ಮಾತ್ರ ಆತ್ಮ ಮಾಡಿದರೆ, ತನ್ನವರೆಗು ಬರುವ ಸುಖದುಃಖಗಳನ್ನು ಮಾತ್ರ ಅನುಭವಿಸುತ್ತಿದೆ. ಶರೀರದಲ್ಲಿ ಆತ್ಮ ಮಾತ್ರ ಸರ್ವಕಾರ್ಯಗಳನ್ನು ಎಲ್ಲವೇಳೆಯಲ್ಲಿ ಮಾಡುತ್ತಲೇ ಇದೆ. ಪ್ರತಿ ಶರೀರದಲ್ಲಿಯೂ ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮೂರು ಆತ್ಮಗಳ ಪಾತ್ರಗಳು ನಿತ್ಯವೂ ನಡೆಯುತ್ತಲೇ ಇವೆ. ಶರೀರದಲ್ಲಿ ಜೀವಾತ್ಮ ಅನುಭವಿಸುವುದು ಮಾತ್ರವೇಯೆಂದು, ಕಾರ್ಯಗಳೆಲ್ಲವನ್ನು ಮಾಡುವುದು ಅತ್ಮ ಒಂದೇಯೆಂದು, ಜೀವಾತ್ಮ, ಆತ್ಮಗಳಿಗೆ ಸಾಕ್ಷಿಯಾಗಿ ಇರುವುದು ಪರಮಾತ್ಮಯೆಂದು ತಿಳಿಯುವಂತೆ, ಆತ್ಮ ಜ್ಞಾನವನ್ನು ತಿಳಿದ ಜ್ಞಾನಿಗಳು 'ಪಕ ಪಕ ನಗುವವನೊಬ್ಬನು, ಗಬ ಗಬ ಅರಚುವವನೊಬ್ಬನು, ಮಿಟ ಮಿಟ ನೋಡುವವನೊಬ್ಬನು" ಎಂದು ಹೇಳಿದ್ದಾರೆ.

**ಪಕ ಪಕ ನಗುವವನು = ಜೀವಾತ್ಮ (ಸುಖದುಃಖಗಳನ್ನು ಅನುಭವಿಸುವವನು)**

**ಗಬ ಗಬ ಅರಚುವವನು = ಆತ್ಮ (ಎಲ್ಲಾ ಕೆಲಸಗಳನ್ನು ಮಾಡುವವನು)**

**ಮಿಟ ಮಿಟ ನೋಡುವವನು = ಪರಮಾತ್ಮ (ಸಾಕ್ಷಿಯಾಗಿ, ಮೌನವಾಗಿ ನೋಡುವವನು)**

## 18. ಹುಟ್ಟಿದವನು, ಗತಿಸಿದವನು, ಗೋಡೆ ಬೊಂಬೆಯಲ್ಲಿ ಇರುವವನೇ

ಗೋಡೆ ಮೇಲೆ ಯಾವುದೊ ಒಂದು ಗೊಂಬೆ ಇರುತ್ತದೆ. ಗೊಂಬೆ ಎಂದರೇ ಯಾವುದೊ ಒಂದು ದೇವರ ಗೊಂಬೆ ಎಂದುಕೊಳ್ಳಿ. ಮೂವತ್ತು

ಮೂರು ಕೋಟಿಗಳ ದೇವತೆಗಳ ಗೊಂಬೆಗಳಲ್ಲಿ ಯಾವ ದೇವತೆಯ ಗೊಂಬೆಯಾದರೂ ಆಗಬಹುದು. ಇಲ್ಲದಿದ್ದರೆ ಯಾವ ಸಿನಿಮಾ ಗೊಂಬೆ ಯಾದರೂ ಆಗಬಹುದು. ಒಂದು ಪಟ್ಟಣದಲ್ಲಿ ಅಗಲವಾಗಿರುವ ಗೋಡೆಗೆ ಸಿನಿಮಾ ಹಿರೋಯಿನ್ ಗೊಂಬೆಯನ್ನು ಅಂಟಿಸಿಟ್ಟಿದ್ದಾರೆ. ಗೋಡೆ ಅಗಲಕ್ಕೂ ದೊಡ್ಡಸೈಜಿನಲ್ಲಿ ಅಂಟಿಸಿಟ್ಟಿರುವ ಆ ಹಿರೋಯಿನ್ ಗೊಂಬೆ ಶರೀರವೆಲ್ಲಾ, ವಸ್ತ್ರಗಳು ಪೂರ್ತಿಯಾಗಿ ಇಲ್ಲದಂತೆ, ಅರೆಬರೆ ವಸ್ತ್ರಗಳಿಂದ ಅಂದವಾಗಿ ಕಾಣಿಸುತ್ತಿದ್ದಾಳೆ. ಚಿಕ್ಕ ಚೆಡ್ಡಿಯನ್ನು ಧರಿಸಿದ ಆ ಗೊಂಬೆಯನ್ನು ಹೆಚ್ಚು ಜನರು ಹೆಚ್ಚು ಆಸಕ್ತಿಯಿಂದ ನೋಡುತ್ತಿದ್ದಾರೆ. ಅದಕ್ಕೆ ಪಕ್ಕದ ಬಜಾರಿನಲ್ಲಿ ಒಂದು ಗೋಡೆಗೆ ಶ್ರೀ ವೆಂಕಟೇಶ್ವರ ಸ್ವಾಮಿ ಗೊಂಬೆಯನ್ನು ಅಂಟಿಸಿ, ವೆಂಕಟೇಶ್ವರ ಕಲ್ಯಾಣ ಇಂತಹ ದಿನ, ಇಂತಹ ಸ್ಥಳದಲ್ಲಿ ನಡೆಯುತ್ತದೆಂದು ಬರೆದಿಟ್ಟಿದ್ದಾರೆ. ಆದರೇ ಆ ಗೊಂಬೆಯನ್ನು ಯಾರೂ ಆಸಕ್ತಿಯಾಗಿ ನೋಡುತ್ತಿಲ್ಲ. ಪಕ್ಕದ ಬಜಾರಿನಲ್ಲಿ ಹೀರೋಯಿನ್ ಗೊಂಬೆಗೆ ಹೋಲಿಸಿ ನೋಡಿದರೆ, ನೂರಕ್ಕೆ ಒಬ್ಬರಿಬ್ಬರಾಗಲಿ ವೆಂಕಟೇಶ್ವರ ಚಿತ್ರಪಟವನ್ನು ನೋಡುತ್ತಿಲ್ಲ. ಈ ವಿಧವಾಗಿ ಮನುಷ್ಯರಲ್ಲಿನ ಆಸಕ್ತಿ ಎಲ್ಲವೂ, ಸಿನಿಮಾ ಗೊಂಬೆಗಳ ಮೇಲೆ ಹೆಚ್ಚಾಗಿ ಇರುವುದೂ, ದೇವತೆಗಳ ಗೊಂಬೆಗಳ ಮೇಲೆ ಕೂಡಾ ಆಸಕ್ತಿ ಇಲ್ಲದೇ ಹೋಗುವುದೂ ಪ್ರತ್ಯಕ್ಷವಾಗಿ ಕಾಣಿಸುತ್ತಿದೆ.

ಈಗ ಹೇಳಿದ ಗಾದೆಯಲ್ಲಿ, ಗೋಡೆಮೇಲಿನ ಗೊಂಬೆಯಲ್ಲಿ ಇರುವವನು ಹುಟ್ಟದವನು, ಗತಿಸದವನು ಎಂದು ಬರೆಯಲ್ಪಟ್ಟಿದೆ. ಹುಟ್ಟದವನು, ಗತಿಸದವನು ಭೂಮಿಮೇಲೆ ಯಾರೂ ಇಲ್ಲ. ಹುಟ್ಟುವುದು, ಸಾಯುವುದು ಪ್ರತಿ ಮನುಷ್ಯನಿಗು, ಪ್ರತಿ ಜೀವರಾಶಿಗು, ತಪ್ಪದೆ ನಡೆಯುತ್ತಿರುವ ಕೆಲಸವಾಗಿದೆ. ಗೋಡೆಮೇಲೆ ಇರುವ ಹೀರೋಯಿನ್ ಹುಟ್ಟಿದ್ದಾಳೆ. ನಂತರ ತಪ್ಪದೆ ಮರಣಿಸಬೇಕಾಗಿದ್ದೆ. ಹಾಗೆಯೇ ಕಾಣಿಸುವುದು ಏನಾದರೂ ನಾಶವಾಗದೆ ತಪ್ಪುವುದಿಲ್ಲ ಎನ್ನುವ ಸೂತ್ರದ ಪ್ರಕಾರ, ವೆಂಕಟೇಶ್ವರನಿಗೆ ಕೂಡಾ ಒಂದಾನೊಂದು ದಿನ ಸಾವು ತಪ್ಪುವುದಿಲ್ಲ. ಆದರೇ ಸಾವುಹುಟ್ಟುಗಳು ಇಲ್ಲದವನು ಒಬ್ಬನೇ ಒಬ್ಬನಿದ್ದಾನೆ, ಆತನೇ ದೇವರು. ಆತನನ್ನು ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಆರನೇ ಶ್ಲೋಕದಲ್ಲಿ “ಅಜೋಪಿ ಸನ್ನವ್ಯಯಾತ್ಮಾ ಭೂತಾನಾ ಮೀಶ್ವರೋಪಿಸನ್”

"ಸರ್ವಜೀವರಾಶಿಗಳಿಗು ದೇವರಾದವನಿಗೆ ನಾಶವಾಗಲಿ, ಹುಟ್ಟುವುದಾಗಲಿ ಇಲ್ಲ" ಎಂದು ಹೇಳಲ್ಪಟ್ಟಿದೆ. ಇದನ್ನನುಸರಿಸಿ ಹುಟ್ಟದವನು, ಹಾಗೆ ಗತಿಸದವನು ದೇವರೆಂದು ತಿಳಿಯುತ್ತಿದೆ. ಆದರೇ ಇದೇ ಭಗವದ್ಗೀತೆಯಲ್ಲಿಯೇ ಹುಟ್ಟದ, ಗತಿಸದ ದೇವರಿಗೆ ಆಕಾರ ಇಲ್ಲವೆಂದು, ಹೆಸರೂ ಇಲ್ಲವೆಂದು ತಿಳಿಸಲ್ಪಟ್ಟಿದೆ. ರೂಪ, ನಾಮ, ಕ್ರಿಯೆಗಳು ಇಲ್ಲದವನು ದೇವರು ಎಂದು ಶಾಸ್ತ್ರಬದ್ಧವಾದ ಶಾಸನ ಇದ್ದಾಗ, ಆಕಾರವಿರುವ ಗೋಡೆಯಮೇಲಿನ ಗೊಂಬೆಯನ್ನು ಹುಟ್ಟದವನು, ಗತಿಸದವನು ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಆದರೇ ಜ್ಞಾನವನ್ನು ತಿಳಿದ ಹಿರಿಯರು, ಗಾದೆಯನ್ನು ತಯಾರು ಮಾಡಿದಾಗ, ಅವರು ಎಲ್ಲಾ ವಿಧಗಳು ಯೋಚಿಸಿ ವಾಸ್ತವವನ್ನೇ ಹೇಳಿರುತ್ತಾರೆ. "ಹಾಗಿರುವಾಗ ಶಾಸ್ತ್ರಕ್ಕೂ, ಹೇಳಿದಮಾತಿಗೂ ಹೊಂದಾಣಿಕೆ ಆಗುವುದಿಲ್ಲ ಅಲ್ಲವೇ! ಅಂತಹ ಈ ಗಾದೆಯನ್ನು ಹಿರಿಯರು ಏಕೆ ಹೇಳಿದ್ದಾರೆ" ಎಂದು ಕೆಲವರು ಕೇಳಬಹುದು. ಅದಕ್ಕೆ ನಾವು ಉತ್ತರವನ್ನು ಈ ವಿಧವಾಗಿ ಹೇಳುತ್ತಿದ್ದೇವೆ.

ಗೋಡೆಮೇಲೆ ವೆಂಕಟೇಶ್ವರನ ಬೊಂಬೆಯನ್ನು ನೋಡಿ, ಬೊಂಬೆಯಲ್ಲಿ ಇರುವವನೇ ದೇವರು ಎಂದರೇ ಕೆಲವರು ಒಪ್ಪಿಕೊಳ್ಳಬಹುದು. ಆದರೇ ಪಕ್ಕದ ಬೀಧಿಯಲ್ಲಿನ ಗೋಡೆಯಮೇಲೆ ಹೀರೋಯಿನ್ ಗೊಂಬೆಯನ್ನು ತೋರಿಸಿ, ಈ ಗೊಂಬೆಯೇ ದೇವರು ಎಂದರೇ ಯಾರೂ ಒಪ್ಪಿಕೊಳ್ಳುವುದಿಲ್ಲ. ಕೊನೆಗೆ ಏನು ತಿಳಿಯದ ಅಜ್ಞಾನಿಗಳು ಕೂಡಾ ಒಪ್ಪಿಕೊಳ್ಳುವುದಿಲ್ಲ. ಹಾಗಿರುವಾಗ ಹುಟ್ಟದ, ಸಾಯದವನು ಗೋಡೆ ಗೊಂಬೆಯಲ್ಲಿ ಇದ್ದಾನೆ ಎಂದು ಏಕೆ ಹೇಳಬೇಕಾಗಿ ಬಂದಿದೆಯೆಂದು ವಿವರಿಸಿಕೊಂಡು ನೋಡಿದರೆ, ದೇವರು ರೂಪ ಇಲ್ಲದಂತೆ ಸರ್ವವೂ ವ್ಯಾಪಿಸಿದ್ದಾನೆ. ಎಲ್ಲಾಕಡೆ ವ್ಯಾಪಿಸಿದ್ದಾನೆ. ಎಲ್ಲಾಕಡೆ ವ್ಯಾಪಿಸಿರುವವನು, ಗೋಡೆ ಗೊಂಬೆಯಲ್ಲಿ ಕೂಡಾ ಇದ್ದಾನೆ ಅಲ್ಲವೆ! ಹಾಗಿರುವಾಗ, ಅಲ್ಲಿರುವ ಗೊಂಬೆ ಯಾವುದಾದರಾಗಲಿ, ಅದನ್ನು ದೇವರೆಂದು ಹೇಳುವುದರಲ್ಲಿ ತಪ್ಪಿಲ್ಲ. ಅಲ್ಲಿರುವುದು ಹೀರೋಯಿನ್ ಬೊಂಬೆಯಾದಾಗ, "ಅದು ಸ್ತ್ರೀ ಗೊಂಬೆಯಾಗುತ್ತದೆ ಅಲ್ಲವೇ! ಸ್ತ್ರೀ ಗೊಂಬೆಯಲ್ಲಿ ಕೂಡಾ ದೇವರಿರುತ್ತಾನಾ? ಅಸಭ್ಯಕರವಾದ ಗೊಂಬೆಯಲ್ಲಿ ಕೂಡಾ ದೇವರಿರುತ್ತಾನಾ?" ಎಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೇ! ಗೊಂಬೆ

ಹೆಣ್ಣಾ, ಗಂಡಾ, ಎನ್ನುವುದು ಸಾರಾಂಶ ಅಲ್ಲ. ಗೊಂಬೆಯಲ್ಲಿ ದೇವರು ವ್ಯಾಪಿಸಿದ್ದಾನಾ ಇಲ್ಲವಾ ಎನ್ನುವುದೇ ಮುಖ್ಯವಾದುದು. ದೇವರು ಅಣು ಅಣುವಿನಲ್ಲಿ ವ್ಯಾಪಿಸಿದ್ದಾನೆ, ಹೆಣ್ಣುಗೊಂಬೆಯಲ್ಲಾಗಲಿ, ಗಂಡು ಗೊಂಬೆ ಯಲ್ಲಾಗಲಿ, ಹೆಂಗಸರಲ್ಲಾಗಲಿ, ಗಂಡಸರಲ್ಲಾಗಲಿ, ವೇಶ್ಯರಲ್ಲಾಗಲಿ, ಸನ್ಯಾಸಿ ಯರಲ್ಲಾಗಲಿ ದೇವರು ಸಮಾನವಾಗಿ ಇದ್ದಾನೆಂದು ತಿಳಿಯುತ್ತಿದೆ. ಇದನ್ನನುಸರಿಸಿ ಸಾವುಹುಟ್ಟುಗಳು ಇಲ್ಲದ ದೇವರು, ಒಂದು ಗೊಂಬೆಯಲ್ಲಿ ಇರುತ್ತಾನೆಂದು ಹೇಳುವುದರಲ್ಲಿ ತಪ್ಪಿಲ್ಲ ಅಲ್ಲವೇ! ಆದ್ದರಿಂದಲೇ ನಮ್ಮ ಹಿರಿಯರು "ಹುಟ್ಟದವನು ಗತಿಸದವನು ಗೋಡೆ ಗೊಂಬೆಯಲ್ಲಿ ಇರುವವನೇ" ಎಂದು ಗಾದೆಯಾಗಿ ಹೇಳಿದ್ದಾರೆ. ಈ ಗಾದೆಯಲ್ಲಿ, ದೇವರ ಜ್ಞಾನ ಎಷ್ಟೋ ಒಳಗೊಂಡಿದೆಯೆಂದು ತಿಳಿಯುತ್ತಿದೆ.

## 19. ಪುರುಷರಲ್ಲಿ ಪುಣ್ಯ ಪುರುಷರು ಬೇರೆಯ.

ಸ್ತ್ರೀಯರು, ಪುರುಷರನ್ನು ಸೇರಿಸಿ ಮನುಷ್ಯರಾಗಿ, ಮಾನವರಾಗಿ ಹೇಳುತ್ತಿದ್ದೇವೆ. ಮಾನವರಲ್ಲಿ, ಅವರ ಭೌತಿಕ ದೇಹವನ್ನನುಸರಿಸಿ ಇವರು ಪುರುಷರೆಂದು, ಇವರು ಸ್ತ್ರೀಯರೆಂದು ಗುರುತಿಸುತ್ತಿದ್ದೇವೆ. ಮನುಷ್ಯರಲ್ಲಿ ಸ್ತ್ರೀ, ಪುರುಷರು ಎನ್ನುವ ಎರಡೇ ಜಾತಿಗಳಿದ್ದರೂ, ಸ್ತ್ರೀ ಜಾತಿಯಲ್ಲಿ ಎರಡು ವಿಧಗಳ ಸ್ತ್ರೀಯರು, ಹಾಗೇ ಪುರುಷರಲ್ಲಿ ಎರಡು ವಿಧಗಳ ಪುರುಷರು ಇದ್ದಾರೆ. ಸ್ತ್ರೀಯರಲ್ಲಾಗಲಿ, ಪುರುಷರಲ್ಲಾಗಲಿ, ಅವರ ಶರೀರದಲ್ಲಿ ತಯಾರಾಗುವ ಹಾರ್ಮೋನ್‌ಗಳನ್ನು ಅನುಸರಿಸಿ, ಸ್ತ್ರೀಯರಲ್ಲಿ ಎರಡು ವಿಧಗಳ ಸ್ತ್ರೀಯರೆಂದು, ಪುರುಷರಲ್ಲಿ ಎರಡು ವಿಧಗಳ ಪುರುಷರಿದ್ದಾರೆಂದು ಹೇಳಬಹುದು. ಇದೆಲ್ಲವೂ ಭೌತಶಾಸ್ತ್ರಕ್ಕೆ ಸಂಬಂಧಿಸಿದ ವಿಷಯ. ಸ್ತ್ರೀಯರಲ್ಲಿ ಹೆಣ್ತನವಿಲ್ಲದ ಸ್ತ್ರೀ (ಮಾಚಕಮ್ಮ) ಅವರು ಕೂಡಾ ಪ್ರತ್ಯೇಕವಾಗಿ ಇದ್ದಾರೆ. ಹಾಗೇ ಪುರುಷರಲ್ಲಿ ನಪುಂಸಕರೆನ್ನುವವರು ಕೂಡಾ ಇದ್ದಾರೆ. ಇದರಿಂದ ಸ್ತ್ರೀಯರಲ್ಲಿ ಒಂದು ಸ್ತ್ರೀಯರು, ಎರಡು ಮಾಚಕಮ್ಮರೆನ್ನುವವರು ಇರುವಾಗ, ಪುರುಷರಲ್ಲಿ ಒಂದು ಪುರುಷ, ಎರಡು ನಪುಂಸಕನೆನ್ನುವವರು ಇದ್ದಾರೆ. ಸ್ತ್ರೀಯರಲ್ಲಿ ಮಾಚಕಮ್ಮರೆನ್ನು ವವರಿಗೆ ಹೆಣ್ತನ ಇರುವುದಿಲ್ಲ. ಮಾಚಕಮ್ಮರದ್ದು ಸ್ತ್ರೀ ಶರೀರವೇ ಆದರೂ

ಆಕೆಗೆ ಹೆಣ್ತನ ಇರುವುದಿಲ್ಲ. ಹಾಗೆ ಪುರುಷರಲ್ಲಿ ನಪುಂಸಕರೆನ್ನುವವರಿಗೆ, ಗಂಡಸುತನ ಇರುವುದಿಲ್ಲ. ನಪುಂಸಕನಿಗೆ ಗಂಡು ಶರೀರವೇ ಇದ್ದರೂ ಆತನಿಗೆ ಗಂಡಸುತನ ಇರುವುದಿಲ್ಲ. ನಪುಂಸಕರನ್ನು ಬಹಳ ಜನರು ನೋಡಿರುತ್ತೀರ. ಆದರೇ ಮಾಚಕಮ್ಮರನ್ನು ಯಾರೂ ನೋಡಿರುವುದಿಲ್ಲ. ಸಮಾಜದಲ್ಲಿ ಮಾಚಕಮ್ಮರು ಎಷ್ಟೋಜನ ಇದ್ದರೂ, ನಪುಂಸಕರು ಹೊರಬಿದ್ದಂತೆ ಮಾಚಕಮ್ಮನವರು ಹೊರಬೀಳುವುದಿಲ್ಲ. ಶರೀರಗಳನ್ನು ಅನುಸರಿಸಿ ಸ್ತ್ರೀ, ಪುರುಷರೆಂದು ಎರಡು ವಿಧಗಳಾಗಿ ಮನುಷ್ಯರನ್ನು ಗುರುತಿಸಿದರೂ ಗಂಡಸರಲ್ಲಿ ಪುರುಷರು, ನಪುಂಸಕರು ಎನ್ನುವ ಎರಡು ವಿಧದವರೂ, ಹೆಂಗಸರಲ್ಲಿ ಸ್ತ್ರೀಯರು, ಮಾಚಕಮ್ಮರೆಂದು ಎರಡು ವಿಧದವರೂ, ಒಟ್ಟು ನಾಲ್ಕು ವಿಧದವರು ಇದ್ದಾರೆಂದು ತಿಳಿಯುತ್ತಿದೆ.

ಇಲ್ಲಿಯವರೆಗು ಸ್ತ್ರೀ, ಪುರುಷರನ್ನು ಭೌತಶಾಸ್ತ್ರದ ಪ್ರಕಾರ ಹೇಳಿಕೊಂಡಿದ್ದೇವೆ. ಈಗ ಶಾಸ್ತ್ರಗಳಲ್ಲಿ ದೊಡ್ಡದಾದ ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ವಿವರಿಸಿಕೊಂಡು ನೋಡಿದರೆ, ಪುರುಷರಲ್ಲಿ ಎರಡು ವಿಧಗಳು, ಸ್ತ್ರೀಯರಲ್ಲಿ ಎರಡು ವಿಧಗಳು ಇದ್ದಾರೆಂದು ತಿಳಿಯುತ್ತಿದೆ. ಭೌತಶಾಸ್ತ್ರದ ಪ್ರಕಾರ ಗಂಡಸರಲ್ಲಿ ಪುರುಷರು, ನಪುಂಸಕರು ಎಂದು ಎರಡು ವಿಧಗಳಾಗಿ ಇರುವಾಗ, ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ಗಂಡಸರಲ್ಲಿ ಪುರುಷರು, ಸ್ತ್ರೀಯರು ಎಂದು ಎರಡು ವಿಧಗಳೂ, ಹೆಂಗಸರಲ್ಲಿ ಸ್ತ್ರೀಯರು, ಪುರುಷರು ಎಂದು ಎರಡು ವಿಧಗಳೂ ಇದ್ದಾರೆ. ಇಲ್ಲಿ ವಿಚಿತ್ರವೇನೆಂದರೇ, ಪುರುಷರಿಗೆ ಪೂರ್ತಿ ಭಿನ್ನವಾದ ಸ್ತ್ರೀಯರನ್ನು ಪುರುಷರಲ್ಲಿ ಸೇರಿಸಿ ಹೇಳುವುದು ವಿಶೇಷವಾಗಿದ್ದು, ಹಾಗೇ ಸ್ತ್ರೀಯರಿಗೆ ಪೂರ್ತಿ ಭಿನ್ನವಾಗಿ ಇರುವ ಪುರುಷರನ್ನು, ಸ್ತ್ರೀಯರಲ್ಲಿ ಸೇರಿಸಿ ಹೇಳುವುದು ಕೂಡಾ ವಿಶೇಷವೇ. ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ಏಕೆ ಹಾಗೆ ಹೇಳಲ್ಪಟ್ಟಿದ್ದಾರೆಂದು ಪರಿಶೀಲಿಸಿ ನೋಡಿದರೆ ಈ ವಿಧವಾಗಿ ತಿಳಿಯುತ್ತಿದೆ. ಉಪ್ಪು, ಕರ್ಪೂರ ಎರಡೂ ಒಂದೇ ಹೋಲಿಕೆ ಇದ್ದು ನೋಡ ನೋಡ ರುಚಿಗಳು ಬೇರೆ ಇಹುದು, ಪುರುಷರಲ್ಲಿ ಪುಣ್ಯ ಪುರುಷರು ಬೇರೆಯೆಂದು ಒಬ್ಬ ಯೋಗಿ ಹೇಳಿದ ವಾಕ್ಯವಿದು. ಉಪ್ಪು, ಕರ್ಪೂರ ಎರಡೂ ಆಕಾರಗಳಲ್ಲಿ

ಒಂದಾಗಿಯೇ ಕಾಣಿಸಿದರೂ, ಅವುಗಳ ರುಚಿಗಳಲ್ಲಿ ಎಷ್ಟೋ ವ್ಯತ್ಯಾಸ ಕಾಣಿಸುತ್ತದೆ. ಅದೇ ವಿಧವಾಗಿ, ಪುರುಷರಲ್ಲಿ ಪುಣ್ಯ ಪುರುಷರು ಬೇರೆಯೆಂದು ವೇಮನಯೋಗಿ ಹೇಳಿದ್ದಾನೆ. ವೇಮನಯೋಗಿ ಹೇಳಿದ ಪ್ರತಿ ಪದ್ಯದಲ್ಲಿಯೂ ಎಷ್ಟೋ ದೊಡ್ಡ ಜ್ಞಾನ ಒಳಗೊಂಡಿರುತ್ತದೆ. ಎಲ್ಲಾ ವಿಧಗಳ, ಜ್ಞಾನದ ಪ್ರಕಾರ ಗಮನಿಸಿದರೆ, ದೈವತ್ವವನ್ನು ತಿಳಿಯಲು ಕೋರುವವರು, ದೇವರ ಜ್ಞಾನ ಇರುವವರನ್ನು ಪುರುಷರೆಂದು, ದೈವಜ್ಞಾನ ಸ್ವಲ್ಪವೂ ಇಲ್ಲದವರನ್ನು ಸ್ತ್ರೀಯರೆಂದು ಹೇಳಬಹುದು.

ಪುರುಷರಲ್ಲಿ ದೈವಜ್ಞಾನ ಇಲ್ಲದವರನ್ನು ಸ್ತ್ರೀತತ್ವ ಇರುವವರಾಗಿ, ದೈವ ಜ್ಞಾನ ಇರುವವರನ್ನು ಪುರುಷತ್ವ ಇರುವವರಾಗಿ ಲೆಕ್ಕಿಸಬಹುದು. ಹಾಗೇ ಸ್ತ್ರೀಯರಲ್ಲಿ ಕೂಡಾ, ದೈವಜ್ಞಾನ ಇರುವವರನ್ನು ಪುರುಷತ್ವ ಇರುವವರಾಗಿ, ದೈವಜ್ಞಾನ ಇಲ್ಲದವರನ್ನು ಸ್ತ್ರೀ ತತ್ತ್ವ ಇರುವವರಾಗಿ ಲೆಕ್ಕಿಸಬಹುದು. ಈ ಸೂತ್ರದ ಪ್ರಕಾರ ಪುರುಷರಲ್ಲಿ ಗಂಡಸರ ಕೆಳಗೆ ಕೆಲವರನ್ನು, ಹೆಂಗಸರ ಕೆಳಗೆ ಕೆಲವರನ್ನು ಜಮಕಟ್ಟಬಹುದು. ಉಪ್ಪು, ಕರ್ಪೂರ ಎರಡು ಒಂದೇ ಆಕಾರವನ್ನು ಹೊಂದಿರುವಂತೆ, ಎಲ್ಲರೂ ಗಂಡಸರೇ ಆದರೂ, ನೋಡುತ್ತಾ ನೋಡುತ್ತಾ ರುಚಿಗಳು ಬೇರೆಯೆನ್ನುವಂತೆ ಅವರನ್ನು ಪರಿಶೀಲಿಸಿ ನೋಡಿದರೆ, ಅವರ ಅಜ್ಞಾನ ಭಾವನೆಗಳನ್ನನುಸರಿಸಿ ಅವರಲ್ಲಿ ಕೆಲವರು ಸ್ತ್ರೀಯರಾಗಿ ಇರುವಂತೆ ತಿಳಿಯುತ್ತಿದೆ. ಬ್ರಹ್ಮವಿದ್ಯೆ ಪ್ರಕಾರ ಪುರುಷರಲ್ಲಿ ಸ್ತ್ರೀಯರಿದ್ದಾರೆಂದು ಸ್ತ್ರೀಯರಲ್ಲಿ ಪುರುಷರಿದ್ದಾರೆಂದು ಹೇಳುತ್ತಿದ್ದೇವೆ. ಸ್ಥೂಲವಾಗಿ ಪುರುಷರೇ ಆದರೂ, ಜ್ಞಾನ ಇಲ್ಲದಿರುವುದರಿಂದ ಕೆಲವರನ್ನು ಸೂಕ್ಷ್ಮವಾಗಿ ಸ್ತ್ರೀಯರಂತೆ ಲೆಕ್ಕಿಸಬೇಕು. ಜ್ಞಾನದ ಪ್ರಕಾರ ಪುರುಷರಲ್ಲಿಯೇ ಜ್ಞಾನ ತಿಳಿದವರನ್ನು ಪುರುಷರಾಗಿ, ಜ್ಞಾನ ಇಲ್ಲದವರನ್ನು ಸ್ತ್ರೀಯರಾಗಿ ಲೆಕ್ಕಿಸಿದರೇ, ಪುರುಷರಲ್ಲಿ ಪುಣ್ಯಪುರುಷರು ಯಾರೆಂದು ಪ್ರಶ್ನೆ ಬರಬಲ್ಲದು. ಜ್ಞಾನ ತಿಳಿದವರು ಹೆಂಗಸರಾದರೂ, ಗಂಡಸರಾದರೂ ಪುರುಷರೆಂದು ಹೇಳಿಕೊಂಡಾಗ ಪ್ರತ್ಯೇಕಿಸಿ ಪುಣ್ಯಪುರುಷರು ಯಾರಾಗಿರುತ್ತಾರೆ? ಅವರು ಪುರುಷರಿಗಿಂತ ಶ್ರೇಷ್ಠವಾದವರಾ ಎಂದು ಕೂಡಾ ಅನುಮಾನ ಬರುತ್ತದೆ. ಅದಕ್ಕೆ ಉತ್ತರವನ್ನು ನೋಡಿದರೆ ಈ ವಿಧವಾಗಿದೆ.

ಪುರುಷರು ಎಂದರೇ ದೈವ ಜ್ಞಾನ ಇರುವವರೆಂದು, ದೇವರ ಜ್ಞಾನಕ್ಕಾಗಿ ಪ್ರಯತ್ನಿಸುವವರೆಂದು ಹೇಳಿಕೊಂಡಿದ್ದೇವೆ. ದೇವರ ಧರ್ಮಗಳನ್ನು ಆಚರಿಸುವವರೆಲ್ಲರೂ ಯಾರಾದರೂ ಪುರುಷರೆ. ದೇವರ ಧರ್ಮಗಳು ಸ್ವಲ್ಪ ತಿಳಿಯದೇಹೋಗಿ, ಧರ್ಮಗಳ ಸ್ಥಾನದಲ್ಲಿ ಅಧರ್ಮಗಳಿರುವಾಗ, ದೇವರ ಮಾರ್ಗದಲ್ಲಿ ಹೋಗಬೇಕೆನ್ನುವ ಮನುಷ್ಯ, ಅಧರ್ಮಗಳನ್ನು ಧರ್ಮ ಗಳೆಂದುಕೊಂಡು ಆಚರಿಸುತ್ತಾನೆ. ಧರ್ಮಗಳನ್ನು ಆಚರಿಸಿದರೂ, ಅಧರ್ಮ ಗಳನ್ನು ಆಚರಿಸಿದರೂ, ದೇವರ ಜ್ಞಾನವೊಂದರ ಉದ್ದೇಶದಿಂದ ಅವರನ್ನು ಪುರುಷರೆಂದೇ ಹೇಳಬಹುದು. ಆದರೇ ಧರ್ಮಗಳನ್ನು ಆಚರಿಸುವವನಿಗೆ ಪಾಪವಾಗಲಿ, ಪುಣ್ಯವಾಗಲಿ ಬರುವುದಿಲ್ಲ. ಆತನು ಕರ್ಮವನ್ನು ದಹಿಸಿಕೊಂಡವನಾಗಿ ಮೋಕ್ಷ ಹೊಂದುವುದಕ್ಕೆ ಅವಕಾಶ ಏರ್ಪಡುತ್ತದೆ. ಒಂದುವೇಳೆ ಧರ್ಮಗಳ ಸ್ಥಾನದಲ್ಲಿರುವ ಅಧರ್ಮಗಳನ್ನು ಆಚರಿಸುವವನು ಕೂಡಾ ಪುರುಷನೇ ಆದರೂ ಅವನಿಗೆ ಪುಣ್ಯಫಲ ಕೈಗೂಡುತ್ತದೆ. ಆಚರಿಸುವುದು ಅಧರ್ಮವಾದುದರಿಂದ ಪುಣ್ಯ ಬರುವುದು ನಡೆಯುತ್ತಿದೆ. ಈ ವಿಷಯವನ್ನು ಭಗವದ್ಗೀತೆ ಅಕ್ಷರ ಪರಬ್ರಹ್ಮಯೋಗವೆನ್ನುವ ಅಧ್ಯಾಯದಲ್ಲಿ, 28ನೇ ಶ್ಲೋಕದಲ್ಲಿ ಹೇಳಿದ್ದಾರೆ.

**ಶ್ಲೋ॥ ವೇದೇಷು ಯಜ್ಞೇಷು ತಪಸ್ಸು ಚೈವ ದಾನೇಷು ಯತ್ಪುಣ್ಯ ಫಲಂಪ್ರದಿಷ್ಟಮ್।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ ಯೋಗೀ ಪರಂಸ್ಥಾನ ಮುಪೈತಿ ಚಾದ್ಯಮ್॥**

**ಭಾವಾರ್ಥ :-** "ಸಂಪೂರ್ಣವಾದ ಜ್ಞಾನವನ್ನು ತಿಳಿದವನು, ವೇದಗಳಿಂದ, ಯಜ್ಞಗಳಿಂದ, ತಪಸ್ಸುಗಳಿಂದ, ದಾನಗಳಿಂದ ಉಂಟಾಗುವ ಪುಣ್ಯ ಫಲವನ್ನು ಅತಿಕ್ರಮಿಸಿ ಯೋಗಿಯಾಗಿ ಮುಕ್ತಿಯನ್ನು ಹೊಂದುತ್ತಾನೆ." ದೈವಜ್ಞಾನದ ಮೇಲೆ ಆಸಕ್ತಿ ಇರುವವನು, ತಾನು ಆಚರಿಸುವುದು ಧರ್ಮವೇ ಎಂದುಕೊಂಡು ಅಧರ್ಮವನ್ನು ಆಚರಿಸಿದರೇ, ಆತನಿಗೆ ಮುಕ್ತಿ ಲಭಿಸುವುದಿಲ್ಲ. ಆತನು ಯೋಗಿ ಆಗಲಾರನು. ಆದರೆ ಆತನಿಗೆ ಪುಣ್ಯ ಬರುತ್ತದೆ. ದೇವರ ಜ್ಞಾನವನ್ನು ಆಶ್ರಯಿಸಬೇಕೆಂದು ಆಲೋಚನೆ ಇರುವವನು, ಧರ್ಮಗಳೆಂದುಕೊಂಡು, ತಿಳಿಯದೆ ಅಧರ್ಮಗಳನ್ನು ಆಚರಿಸಿದರೂ, ಅವನು ಪುರುಷನ ಕೆಳಗೇ

ಜಮಕಟ್ಟಲ್ಪಡುತ್ತದೆ. ಅಧರ್ಮಗಳಾದ ವೇದಗಳಿಂದ, ಯಜ್ಞಗಳಿಂದ, ತಪ್ಪಸ್ಸುಗಳಿಂದ, ದಾನಗಳಿಂದ ಪುಣ್ಯಬಂದು ಅವರು ಮೋಕ್ಷವನ್ನು ಹೊಂದುವುದಿಲ್ಲ. ಆದ್ದರಿಂದ "ಪುರುಷರಲ್ಲಿ ಪುಣ್ಯಪುರುಷರು ಬೇರೆ ಅಯ್ಯಾ" ಎಂದು ವೇಮನಯೋಗಿ ಹೇಳಿದ್ದಾನೆ. ಆ ಮಾತನ್ನೇ ಪ್ರಜೆಗಳು ಗಾದೆಯಾಗಿ ಬಳಸುತ್ತಿದ್ದಾರೆ. ಈ ಮಾತು ಮೇಲ್ನೋಟಕ್ಕೆ ಕಾಣಿಸುವುದಕ್ಕೆ ಸರ್ವ ಸಾಧಾರಣವಾಗಿ ಇದ್ದರೂ, ಪುರುಷನು ಎನ್ನುವಮಾತಿಗೆ ಎಷ್ಟೋ ಭಾವವನ್ನು ತೋರಿಸುತ್ತಿದೆ. ಮೂತಿಗೆ ಮೀಸೆ ಇರುವವರು ಪುರುಷರೆಂದು, ಇಲ್ಲದವರು ಸ್ತ್ರೀಯರೆಂದು ಅಂದುಕೊಳ್ಳುವುದಕ್ಕೆ ಸಾಧ್ಯವಿಲ್ಲ. ಜ್ಞಾನರೀತ್ಯಾ ಸ್ತ್ರೀಯರನ್ನು ಕೂಡಾ ಪುರುಷರಾಗಿ ಪರಿಗಣಿಸಬಹುದೆಂದು ತಿಳಿಯುತ್ತಿದೆ. ಹಾಗೆ ಪುರುಷರಾಗಿ ಲೆಕ್ಕಿಸಲ್ಪಡುವವರು ಯಾರೆ ಆದರೂ, ಅಧರ್ಮಗಳನ್ನು ಆಚರಿಸುವುದರಿಂದ ಪುಣ್ಯಪುರುಷರಾಗುತ್ತಿದ್ದಾರೆಂದು, ಧರ್ಮಗಳನ್ನು ಆಚರಿಸಿದವರು ಮೋಕ್ಷ ಪುರುಷರಾಗುತ್ತಿದ್ದಾರೆಂದು ತಿಳಿಯುತ್ತಿದೆ.

## 20. ಹಳ್ಳಿ ತಿರುಗಿದರೂ ಏಳೇ ಸೀರೆಗಳು, ಪಟ್ಟಣ ತಿರುಗಿದರೂ ಏಳೇ ಸೀರೆಗಳು

ಹಳ್ಳಿಗಳು ವ್ಯವಸಾಯ ಕೇಂದ್ರಗಳೆಂದು ಹೇಳಬಹುದು. ಹಾಗೇ ಪಟ್ಟಣಗಳು ವ್ಯಾಪಾರ ಕೇಂದ್ರಗಳೆಂದು ಹೇಳಬಹುದು. ಪಟ್ಟಣಗಳಿಗೆ ರಹದಾರಿಗಳು ಇರುತ್ತವೆ, ಹಳ್ಳಿಗಳಿಗೆ ಚಿಕ್ಕ ದಾರಿಗಳಿರುತ್ತವೆ ಪಟ್ಟಣಗಳೆಲ್ಲ ರಹದಾರಿ ಹಿಂದೆ ಇರುತ್ತವೆ. ಹಳ್ಳಿಗಳು ಒಂದೇ ದಾರಿಯಲ್ಲಿ ಇಲ್ಲದಂತೆ, ಅಲ್ಲೊಂದು, ಅಲ್ಲೊಂದು ಬಿಸಾಕಿದಂತೆ ಇರುತ್ತವೆ. ನಮ್ಮ ಭಾರತದೇಶದಲ್ಲಿ ಹಳ್ಳಿಗಳು, ಪಟ್ಟಣಗಳು ಹೀಗೆ ಇರುವಾಗ, 'ಇಂದುಶ್ರೀ' ಎನ್ನುವ ದೇಶದಲ್ಲಿ ಭಾರತದೇಶದಲ್ಲಿ ಇರುವಂತೆ ಹಳ್ಳಿಗಳು ಪಟ್ಟಣಗಳು ಇವೆ. ಇಂದುಶ್ರೀ ದೇಶಕ್ಕೆ, 'ಬ್ರಹ್ಮಶ್ರೀ' ಎನ್ನುವ ಮತ್ತೊಂದು ಹೆಸರು ಕೂಡಾ ಇದೆ. ಅದು ಜ್ಞಾನಿಗಳಿಗೆ ನಿಲಯವಾದ ದೇಶವಾದ್ದರಿಂದ, ಇಂದುಶ್ರೀ ಎನ್ನುವುದು ನಡೆದಿದೆ. ಆ ದೇಶವೊಂದರ ಜ್ಞಾನಿಗಳಿಗೆ ಅಲ್ಲದೇ, ಯೋಗಿಗಳಿಗು ಕೂಡಾ ನಿಲಯವಾದ ದೇಶ. ಆದ್ದರಿಂದ ಆ ದೇಶಕ್ಕೆ 'ಬ್ರಹ್ಮಶ್ರೀ' ಎನ್ನುವ ಹೆಸರು ಕೂಡಾ ಬಂದಿದೆ.

ಜ್ಞಾನಿಗಳಿಗು, ಯೋಗಿಗಳಿಗು ನಿಲಯವಾದುದೇ ಅಲ್ಲದೇ, ಧನಿಕರಿಗು ಕೂಡಾ ನಿಲಯವಾದ ದೇಶವಾದ್ದರಿಂದ, ಆ ದೇಶಕ್ಕೆ 'ರಾಜಶ್ರೀ' ಎನ್ನುವ ಹೆಸರು ಕೂಡಾ ಇದೆ. ಇಂದುಶ್ರೀ, ಬ್ರಹ್ಮಶ್ರೀ, ರಾಜಶ್ರೀ ಎನ್ನುವ ಮೂರು ಹೆಸರುಗಳಿರುವ ಆ ದೇಶದಲ್ಲಿ, ದೇಶದ ಒಟ್ಟಾರೆ ಏಳು ಪಟ್ಟಣಗಳು, ಏಳು ಹಳ್ಳಿಗಳು ಮಾತ್ರ ಇವೆ. ದೇಶವೆಲ್ಲ ಸೇರಿಸಿದರೂ, 14 ಊರುಗಳಿರುವಾಗ, ಅದರಲ್ಲಿ ಏಳು ಪಟ್ಟಣಗಳು, ಏಳು ಹಳ್ಳಿಗಳು ಮಾತ್ರ ಇವೆ. ಒಬ್ಬ ಸೀರೆಗಳ ವ್ಯಾಪಾರಸ್ಥನು, ಊರುಗಳು ತಿರುಗಿ ಸೀರೆಗಳನ್ನು ಮಾರುಕೊಳ್ಳುತ್ತಿದ್ದನು. ಆತನು ತನ್ನ ಸೀರೆಗಳ ಮೂಟೆಯನ್ನು ತೆಗೆದುಕೊಂಡು, ಇಂದುಶ್ರೀ ದೇಶದಲ್ಲಿ ಮೊದಲು, ರಹದಾರಿ ಜೊತೆಗಿರುವ ಪಟ್ಟಣಗಳಲ್ಲಿ ತನ್ನ ವ್ಯಾಪಾರವನ್ನು ಸಾಗಿಸುವುದಕ್ಕೆ ಹೋಗಿದ್ದಾನೆ. ಇಂದುಶ್ರೀ ದೇಶ ಪೂರ್ವ, ಪಶ್ಚಿಮದಲ್ಲಿ ಸ್ವಲ್ಪ ವಿಸ್ತರಿಸಿ, ದಕ್ಷಿಣದಿಂದ ಉತ್ತರದಕಡೆ ಉದ್ದವನ್ನು ಹೊಂದಿದ್ದು, ಜಪಾನ್ ದೇಶವಿರುವಂತೆ ಇದೆ. ಸೀರೆಗಳ ವ್ಯಾಪಾರಸ್ಥನು ಮೊದಲದಿನ ದಕ್ಷಿಣ ದಿಕ್ಕಿನಿಂದ ತನ್ನ ವ್ಯಾಪಾರವನ್ನು ಪ್ರಾರಂಭಿಸಬೇಕೆಂದುಕೊಂಡಿದ್ದಾನೆ. ದಕ್ಷಿಣ ಮೊದಲಗೊಂಡು ಉತ್ತರದವರೆಗು ಏಳು ದೊಡ್ಡ ಪಟ್ಟಣಗಳು ಇವೆ. ಸೀರೆಗಳ ವ್ಯಾಪಾರಸ್ಥನು ದಕ್ಷಿಣ ಪ್ರಾಂತದಲ್ಲಿರುವ ಪಾಡ್ಯಮಿ ಎನ್ನುವ ಪಟ್ಟಣದಿಂದ ವ್ಯಾಪಾರವನ್ನು ಪ್ರಾರಂಭ ಮಾಡಿದ್ದಾನೆ. ಪಾಡ್ಯಮಿ ಹೆಸರಿಗೆ ಪಟ್ಟಣವೇ ಆದರೇ, ಬಹಳ ಕಡಿಮೆ ಜನಸಂಖ್ಯೆ ಇರುವ ಪಟ್ಟಣ. ವ್ಯಾಪಾರಸ್ಥನು ಆ ನಗರವೆಲ್ಲ ತಿರುಗಿ ವ್ಯಾಪಾರವನ್ನು ಸಾಗಿಸಿದ್ದಾನೆ. ಪಾಡ್ಯಮಿ ನಗರದಲ್ಲಿ ಜನಸಂಖ್ಯೆ ಒಟ್ಟು ಕೇವಲ ಆರುನೂರು (600) ಮಾತ್ರವೇ ಇದ್ದಾರೆ. ಪಾಡ್ಯಮಿ ಪಟ್ಟಣವೆಲ್ಲ ಮುಗಿದುಹೋದ ನಂತರ ನೋಡಿಕೊಂಡರೆ ಏಳು(7) ಸೀರೆಗಳು ಮುಗಿದುಹೋಗಿವೆ. ನಂತರ ಉತ್ತರ ದಿಕ್ಕಿನಲ್ಲಿರುವ 'ವಿದಿಯ' ಎನ್ನುವ ಎರಡನೇ ಪಟ್ಟಣಕ್ಕೆ ವ್ಯಾಪಾರಸ್ತನು ಹೋಗಿದ್ದಾನೆ. ವಿದಿಯ ಪಟ್ಟಣ,ಆರು ಸಾವಿರ (6000) ಜನರಿರುವ ಪಟ್ಟಣ ಆಗಿರುವುದರಿಂದ, ತನ್ನ ಸೀರೆಗಳು ಹೆಚ್ಚಾಗಿ ಮಾರಾಟವಾಗುತ್ತವೆಂದು ಅಂದುಕೊಂಡಿದ್ದಾನೆ. ಆದರೇ ಆ ಪಟ್ಟಣವೆಲ್ಲ ಸಹನೆಯಿಂದ ತಿರುಗಿ ಮಾರಿದರೂ ಏಳೇ (7) ಸೀರೆಗಳು ಹೋಗಿವೆ. ಅಲ್ಲಿಂದ ತದಿಯ ಎನ್ನುವ ಮೂರನೆ ಪಟ್ಟಣಕ್ಕೆ ಹೋದ ವ್ಯಾಪಾರಸ್ತನು, ತನ್ನ ವ್ಯಾಪಾರವನ್ನು ಮುಂದುವರೆಸಿದ್ದಾನೆ. ತದಿಯ ಪಟ್ಟಣವೊಂದರ ಜನಸಂಖ್ಯೆ

ಆರುಸಾವಿರ (6000) ಮಂದಿ. ಅಲ್ಲಿಯೂ ಕೂಡಾ ಏಳೇ (7) ಸೀರೆಗಳು ಹೋಗಿವೆ. ನಂತರ ಚೌತಿ ಎನ್ನುವ ನಾಲ್ಕುನೆ ಪಟ್ಟಣಕ್ಕೆ ವ್ಯಾಪಾರಸ್ತನು ಹೋಗಿದ್ದಾನೆ. ಆ ನಾಲ್ಕನೆ ಪಟ್ಟಣದಲ್ಲಿ ಕೂಡಾ ಜನಸಂಖ್ಯೆ ಆರು ಸಾವಿರ (6000) ಮಾತ್ರವೇ ಇದೆ.

ಚವತಿ ಪಟ್ಟಣದಲ್ಲಿ ಕೂಡಾ ಏಳು (7) ಸೀರೆಗಳು ಮಾತ್ರವೇ ಮಾರಟವಾಗಿವೆ. ಅಲ್ಲಿಂದ ಪಂಚಮಿ ಎನ್ನುವ ಐದನೆ ಪಟ್ಟಣಕ್ಕೆ ಹೋಗಿದ್ದಾನೆ. ಪಂಚಮಿ ಪಟ್ಟಣದಲ್ಲಿ ಜನಸಂಖ್ಯೆ ಸಾವಿರ(1000) ಜನ ಮಾತ್ರವೇ ಇದ್ದಾರೆ. ವ್ಯಾಪಾರಸ್ತನು ಪಂಚಮಿ ಪಟ್ಟಣವೆಲ್ಲ ತಿರುಗಿ ತನ್ನ ಸೀರೆಗಳನ್ನು ಮಾರುಕೊಂಡರೆ ಅಲ್ಲಿಯೂ ಕೂಡಾ ಏಳು (7) ಸೀರೆಗಳು ಮಾತ್ರವೇ ಹೋಗಿವೆ. ನಂತರ ಆ ವ್ಯಾಪಾರಿ ಷಷ್ಠಿ ಎನ್ನುವ ಆರನೆ ಪಟ್ಟಣಕ್ಕೆ ಹೋಗಿದ್ದಾನೆ. ಆರನೆ ಪಟ್ಟಣದಲ್ಲಿ ಕೂಡಾ ಏಳು (7) ಸೀರೆಗಳು ಮಾತ್ರವೇ ಹೋಗಿವೆ. ವಿಚಿತ್ರವೇನೆಂದರೇ ಆರನೇ ಪಟ್ಟಣದಲ್ಲಿ ಕೂಡಾ ಜನಸಂಖ್ಯೆ ಸಾವಿರ (1000) ಜನ ಮಾತ್ರವೇ ಇದ್ದಾರೆ. ಇನ್ನು ಕೊನೆಯದು, ಏಳನೆಯದು ದೇಶಕ್ಕೆ ರಾಜಧಾನಿಯಾದ ಸಪ್ತಮಿ ಎನ್ನುವ ಪಟ್ಟಣಕ್ಕೆ ವ್ಯಾಪಾರಿ ಹೋಗಿದ್ದಾನೆ. ಅದು ಇಂದುಶ್ರೀ ದೇಶಕ್ಕೆ ರಾಜಧಾನಿ ಆದರೂ, ಅದರಲ್ಲಿ ಕೂಡಾ ಜನಸಂಖ್ಯೆ ಸಾವಿರ (1000) ಜನ ಮಾತ್ರವೇ. ಆತನು, ಅಲ್ಲಿ ಕೂಡಾ ವ್ಯಾಪಾರವನ್ನು ಸಾಗಿಸಿ, ಅಲ್ಲಿಯೂ ಕೂಡಾ ಏಳು (7) ಸೀರೆಗಳು ಮಾತ್ರವೇ ಮಾರಟವಾಗಿವೆ. ಈ ವಿಧವಾಗಿ ವ್ಯಾಪಾರಿ, ಏಳು ಪಟ್ಟಣಗಳು ತಿರುಗಿದಾಗ, ಒಂದೊಂದು ಪಟ್ಟಣದಲ್ಲಿ ಏಳು ಸೀರೆಗಳ ಪ್ರಕಾರ, ಒಟ್ಟು 49 ಸೀರೆಗಳು ಮಾರಾಟವಾಗಿವೆ. ಪೂರ್ತಿಯಾಗಿ ಏಳು ಪಟ್ಟಣಗಳು ತಿರುಗಿ, ವ್ಯಾಪಾರಿ ಇನ್ನು ಹಳ್ಳಿಗಳನ್ನು ನೋಡಬೇಕೆಂದುಕೊಂಡಿದ್ದಾನೆ. ಸಪ್ತಮಿ ಪಟ್ಟಣಕ್ಕೆ ಅತಿ ಸಮೀಪದಲ್ಲಿರುವ ಹಳ್ಳಿಗೆ ಎರಡನೆ ದಿನ ಹೋಗಬೇಕೆಂದುಕೊಂಡಿದ್ದಾನೆ.

ಸಪ್ತಮಿ ಪಟ್ಟಣಕ್ಕೆ ಹತ್ತಿರವಾಗಿರುವ ಹಳ್ಳಿಯ ಹೆಸರು ಅಷ್ಟಮಿ. ಅಷ್ಟಮಿ ಚಿಕ್ಕ ಹಳ್ಳಿಯೇ ಆದರೂ, ಸಪ್ತಮಿ ಪಟ್ಟಣಕ್ಕಿಂತ ಬಹಳ ಚೆನ್ನಾಗಿದೆ. ಅಲ್ಲಿನ ಜನಾಸಂಖ್ಯೆ ಎಷ್ಟು ಇದೆಯೋ ತಿಳಿದಿಲ್ಲ ಆದರೆ, ಒಟ್ಟಾರೆ ಅಲ್ಲಿಯೂ ಕೂಡಾ

ಏಳು (7) ಸೀರೆಗಳೇ ಹೋಗಿವೆ. ಅಲ್ಲಿಂದ ದಕ್ಷಿಣ ದಿಶೆಗೆ ಹೊರಟಿರುವ ವ್ಯಾಪಾರಿ ನವಮಿ ಎನ್ನುವ ಹಳ್ಳಿಗೆ ಬಂದಿದ್ದಾನೆ. ಅಲ್ಲಿ ಕೂಡಾ ಎಷ್ಟು ತಿರುಗಿ ಮಾರಿದರೂ, ಏಳು (7) ಸೀರೆಗಳು ಮಾತ್ರವೇ ಹೋಗಿವೆ. ನಂತರ ದಶಮಿ ಎನ್ನುವ ಹಳ್ಳಿಗೆ ಬಂದಿದ್ದಾನೆ. ಅಲ್ಲಿಯೂ ಕೂಡಾ ಎಷ್ಟು ಜನಸಂಖ್ಯೆ ಇದೆಯೊ ತಿಳಿದಿಲ್ಲ. ಆದರೇ ಅಲ್ಲಿಯೂ ಕೂಡಾ ಏಳು (7) ಸೀರೆಗಳು ಮುಗಿದುಹೋಗಿವೆ. ಅಲ್ಲಿಂದ ಏಕಾದಶಿ ಹಳ್ಳಿಗೆ ಬಂದಿದ್ದಾನೆ. ಅಲ್ಲಿಯೂ ಕೂಡಾ ಏಳೇ (7) ಸೀರೆಗಳು ಹೋಗಿವೆ. ನಂತರ ದ್ವಾದಶಿ, ಆ ನಂತರ ತ್ರಯೋದಶಿ ಎನ್ನುವ ಹಳ್ಳಿಗಳನ್ನು, ಆ ವ್ಯಾಪಾರಿ ತಿರುಗಿದ್ದಾನೆ. ಆ ಎರಡು ಹಳ್ಳಿಗಳಲ್ಲಿಯು ಒಂದೊಂದು ಊರಿನಲ್ಲಿ ಏಳು (7) ಸೀರೆಗಳ ಪ್ರಕಾರ ಎರಡು ಊರುಗಳಲ್ಲಿ ಹದಿನಾಲ್ಕು (14) ಸೀರೆಗಳು ಮಾರಾಟವಾಗಿವೆ. ಇನ್ನು ಕೊನೆಯಲ್ಲಿರುವ ಚತುರ್ದಶಿ ಎನ್ನುವ ಹಳ್ಳಿಗೆ ಬಂದಿದ್ದಾನೆ. ಅಲ್ಲಿ ಕೂಡಾ ಏಳು (7) ಸೀರೆಗಳು ಮಾತ್ರವೇ ಖರ್ಚಾಗಿವೆ. ಒಟ್ಟು ಏಳು ಹಳ್ಳಿಗಳಲ್ಲಿ ಎಷ್ಟು ಜನಸಂಖ್ಯೆ ಇದೆಯೆಂದು ವಿಚಾರಿಸಿದಾಗ, ಕೊನೆಯ ಊರಿನಲ್ಲಿರುವ ಒಬ್ಬ ರೆವಿನ್ಯೂ ಅಧಿಕಾರಿಯಿಂದ ತಿಳಿದ ಸಮಾಚಾರದ ಪ್ರಕಾರ, 21,600 ಜನರು ಏಳು ಊರುಗಳಲ್ಲಿ ಇರುವಂತೆ ತಿಳಿದಿದೆ. ಏಳು ಪಟ್ಟಣಗಳಲ್ಲಿರುವ ಜನಸಂಖ್ಯೆಯೊಂದಿಗೆ ಸಮಾನವಾಗಿ, ಏಳು ಹಳ್ಳಿಗಳ ಜನಸಂಖ್ಯೆ ಇರುವುದು ವಿಚಿತ್ರವಾಗಿದ್ದು, ಎಲ್ಲಾ ಪಟ್ಟಣಗಳಲ್ಲಿಯೂ, ಹಳ್ಳಿಗಳಲ್ಲಿಯೂ ಪ್ರತಿಯೊಂದುಕಡೆ ಏಳು ಸೀರೆಗಳು ಹೋಗುವುದು ಮತ್ತಷ್ಟು ವಿಚಿತ್ರ! ಇಂದುಶ್ರೀ ದೇಶ ಒಟ್ಟು ಹಳ್ಳಿ ಪಟ್ಟಣಗಳು ಹದಿನಾಲ್ಕು ಆಗಿದ್ದು, ಒಟ್ಟು ಜನಸಂಖ್ಯೆ 43,200(ಒಂದು ಹಗಲು 12 ಗಂಟೆಗಳಿಗೆ, ಒಟ್ಟು ಸೆಕೆಂಡುಗಳು 43,200, ಎಂದು ನಾವು **"ಕಲಿಯುಗ"** ಎನ್ನುವ ಗ್ರಂಥದಲ್ಲಿ ಬರೆದಿರುವುದು ಜ್ಞಾಪಕ ಇಟ್ಟುಕೊಳ್ಳಬೇಕು).

ಇದೆಲ್ಲವೂ ಓದಿದ ನಂತರ, ಹಳ್ಳಿಗಳು, ಪಟ್ಟಣಗಳು, ಸೀರೆಗಳು, ವ್ಯಾಪಾರ ಇದೆಲ್ಲಾ ಏತಕ್ಕೆ? ಇದರಲ್ಲಿ ಏನು ಜ್ಞಾನ ಇದೆಯೆಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ನಾವು ಹೇಳುವುದು ಏನೆಂದರೇ! ಮಾನವ ಜೀವನದಲ್ಲಿ ಏಳು (7) ಸಂಖ್ಯೆ ಬಹಳ ಪ್ರಾಮುಖ್ಯವಾದುದು. ಅಷ್ಟೇ ಅಲ್ಲದೇ ಒಂದು ಸೂರ್ಯ ಕಿರಣವನ್ನು ವಿಭಜಿಸಿ ನೋಡಿದರೆ ಏಳು (7) ಭಾಗಗಳು ಆಗುತ್ತಿದೆ.

ವಾರಕ್ಕೆ ಏಳು ದಿನಗಳು ಇವೆ. ಇವೆಲ್ಲದಕ್ಕು ಮೀರಿ, ಇಷ್ಟು ಕಥೆ ಹೇಳುವುದರ ಹಿಂದೆ ಮುಖ್ಯವಾದ ಜ್ಞಾನವಿದೆ. ಮಾನವನ ಶರೀರದಲ್ಲಿ ತಲೆಯಿಂದ ಗುದಸ್ಥಾನದವರೆಗು ವ್ಯಾಪಿಸಿರುವ ಬೆನ್ನುಮೂಳೆಯಲ್ಲಿ, ಕುಂಡಲಿನಿ ಶಕ್ತಿ (ಬೆನ್ನುಉರಿ) ಎನ್ನುವ ದೊಡ್ಡ ನರವಿದೆ. ಕುಂಡಲಿನಿ ಎನ್ನುವ ನಾಡಿಯನ್ನು, ಆಧ್ಯಾತ್ಮಿಕ ಭಾಷೆಯಲ್ಲಿ ಬ್ರಹ್ಮನಾಡಿ, ಸುಷುಮ್ನ ನಾಡಿ ಎಂದು ಕೂಡ ಕರೆಯುತ್ತಾರೆ. ಈಗ ಅಸಲು ವಿಷಯಕ್ಕೆ ಬರೋಣ. ಕುಂಡಲಿನಿ ಇಲ್ಲವೇ ಬ್ರಹ್ಮನಾಡಿಯನ್ನು ಮೇಲಿನ ಕಥೆಯಲ್ಲಿ ಹೇಳಿದ ಹೆದ್ದಾರಿಯಾಗಿ ಲೆಕ್ಕಿಸುತ್ತೇವೆ. ಈ ನಿಟ್ಟಿನಲ್ಲಿ, ಮನುಷ್ಯ ಶರೀರವನ್ನು ಇಂದುಶ್ರೀ ದೇಶವಾಗಿ ಹೇಳುತ್ತಿದ್ದೇವೆ. ಇಂದುಶ್ರೀ ದೇಶದಲ್ಲಿ ಏಳು (7) ಪಟ್ಟಣಗಳು, ಏಳು ಹಳ್ಳಿಗಳಿರುವಂತೆ ಮನುಷ್ಯನ ಶರೀರದಲ್ಲಿ ಏಳು ನಾಡಿಕೇಂದ್ರಗಳು ಪಟ್ಟಣಗಳಾಗಿ, ಏಳು ಗ್ರಂಥಿಗಳು ಹಳ್ಳಿಗಳಾಗಿ ಇರುವಂತೆ ತಿಳಿಯಬೇಕು. ರಹದಾರಿಯಾಗಿ ಲೆಕ್ಕಿಸುತ್ತಿರುವ ಬ್ರಹ್ಮನಾಡಿಯಲ್ಲಿರುವ, ಏಳು ನಾಡಿಕೇಂದ್ರಗಳನ್ನು ಏಳು (7) ಪಟ್ಟಣಗಳಾಗಿ ತಿಳಿದರೇ, ಏಳು ನಾಡಿಕೇಂದ್ರಗಳು ಒಂದು ದಿನಕ್ಕೆ, 21,600 ಶ್ವಾಸಗಳು ನಡೆಸುತ್ತಿವೆ. ಈ ಸಂಖ್ಯೆಯನ್ನೇ, ಏಳು ಪಟ್ಟಣಗಳ ಜನಸಂಖ್ಯೆಯಾಗಿ ಹೇಳಿಕೊಂಡಿದ್ದೇವೆ. ಶರೀರದಲ್ಲಿನ ಏಳುನಾಡಿ ಕೇಂದ್ರಗಳು ಪಟ್ಟಣಗಳಾಗಿ ಗುರುತಿಸಿದಂತೆ, ನಮ್ಮ ಶರೀರದಲ್ಲಿನ ಏಳು ಗ್ರಂಥಿಗಳನ್ನು ಕಥೆಯಲ್ಲಿನ ಏಳು ಹಳ್ಳಿಗಳಾಗಿ ಗುರುತಿಸಬಹುದು. ಒಬ್ಬ ಮನುಷ್ಯ ಶರೀರದಲ್ಲಿ ಏಳು ನಾಡಿಕೇಂದ್ರಗಳು, ಏಳು ಗ್ರಂಥಿಗಳು ಇರುವುದರಿಂದ ಮನುಷ್ಯನ ಜೀವನ ಸಾಗುತ್ತಿದೆ. ನಾಡಿಕೇಂದ್ರಗಳು ಶರೀರಕ್ಕೆ ಬಲವನ್ನು ಒದಗಿಸಿದಾಗ, ಏಳು ಗ್ರಂಥಿಗಳು ಶರೀರಕ್ಕೆ ಆರೋಗ್ಯವನ್ನು ಕೊಡುತ್ತಿವೆ. ಶಕ್ತಿಗೆ ಏಳು ನಾಡಿಕೇಂದ್ರಗಳು, ಆರೋಗ್ಯಕ್ಕೆ ಏಳು ರಸ ಗ್ರಂಥಿಗಳು ಶರೀರದಲ್ಲಿ ನೆಲೆಗೊಳಿ ಸಲ್ಪಟ್ಟಿವೆ. ಒಂದುಕಡೆ ಏಳು ನಾಡಿಕೇಂದ್ರಗಳು, ಮತ್ತೊಂದು ಕಡೆ ಏಳು ರಸಗ್ರಂಥಿಗಳು, ಸಮಾನವಾಗಿ ಶರೀರವನ್ನು ಪೋಷಿಸುತ್ತಿವೆ. ಆದ್ದರಿಂದ ವ್ಯಾಪಾರಿ ಎಲ್ಲಿಗೆ ಹೋದರೂ, ಏಳು ಸೀರೆಗಳು ಹೋದಂತೆ ಬರೆದಿದ್ದೇವೆ. ಹಾಗೆ ಬರೆಯುವುದರಿಂದ ಎಲ್ಲಾ ಕೇಂದ್ರಗಳು, ಎಲ್ಲಾ ಗ್ರಂಥಿಗಳು ಸಮಾನವಾಗಿ ಕೆಲಸ ಮಾಡುತ್ತಿವೆಯೆಂದು ತಿಳಿಯುತ್ತಿದೆ.

ಇಂದುಶ್ರೀ ದೇಶಕ್ಕೆ ಏಳನೇ ಪಟ್ಟಣ ದೇಶ ರಾಜಧಾನಿಯಾಗಿ ಇರುವಂತೆ ನಮ್ಮ ಶರೀರದಲ್ಲಿ, ಏಳನೇ ನಾಡಿಕೇಂದ್ರವಾದ ಮೆದಳು ಮುಖ್ಯ ಕೇಂದ್ರವಾಗಿದೆ. ಅಷ್ಟೇ ಅಲ್ಲದೇ, ಅಷ್ಟಮಿ ಎನ್ನುವ ಹಳ್ಳಿ, ಸಪ್ತಮಿ ಎನ್ನುವ ಪಟ್ಟಣಕ್ಕಿಂತ ಚೆನ್ನಾಗಿದೆಯೆಂದು ಹೇಳಿದಂತೆ, ಏಳು ರಸಗ್ರಂಥಿಗಳಲ್ಲಿ ಗ್ರಂಥಿ ರಾಜ (ಪಿಟ್ಯೂಟರಿ ಗ್ಲಾಂಡ್) ಎಂದು ಹೆಸರಿರುವ ಗ್ರಂಥಿ, ಏಳನೆ ನಾಡಿಕೇಂದ್ರದಂತೆ, ಗ್ರಂಥಗಳಲ್ಲಿ ಮುಖ್ಯವಾದ ಸಾರಾಂಶವಾಗಿ ಇದೆ. ಏಳನೆ ನಾಡಿಕೇಂದ್ರ. ಎಂಟನೇ ರಾಜಗ್ರಂಥಿ ತಲೆಯಲ್ಲಿ ಒಂದೇ ಸ್ಥಾನದಲ್ಲಿವೆ. ಪ್ರಪಂಚದಲ್ಲಿನ ಸರ್ವಜೀವರಾಶಿಗಳನ್ನು ನಡೆಸುವ ಆತ್ಮಶಕ್ತಿ, ಏಳನೆನಾಡಿಕೇಂದ್ರದಲ್ಲಿಯೂ, ಎಂಟನೆಯ ಗ್ರಂಥಿ ರಾಜದಲ್ಲಿಯೂ ಇದೆ. ಆತ್ಮಶಕ್ತಿ ಅರ್ಧ ಸಪ್ತಮಿ ಕೇಂದ್ರದಲ್ಲಿಯೂ, ಅರ್ಧ ಅಷ್ಟಮಿ ಗ್ರಂಥಿಯಲ್ಲಿಯೂ ಇರುವುದು ಬಹಳಜನರಿಗೆ ತಿಳಿದಿಲ್ಲ. ಒಟ್ಟಾರೆ ಆತ್ಮ ವಿಷಯವೇ ಯಾರಿಗೂ ತಿಳಿದಿಲ್ಲ. ಏಳನೆ ಕೇಂದ್ರ, ಎಂಟನೆ ಗ್ರಂಥಿ ಎರಡೂ, ಒಂದೇ ಸ್ಥಳದಲ್ಲಿ ಇರುವಂತೆ ಕೂಡಾ ಯಾರಿಗೂ ತಿಳಿದಿಲ್ಲ. ಗ್ರಂಥಿ ರಾಜ, ತಲೆ ಮಧ್ಯದಲ್ಲಿ ಇದೆಯೆಂದು ಹೇಳಿದರೂ, ಅದರಲ್ಲಿ ಯಾವ ಶಕ್ತಿ ಕೆಲಸ ಮಾಡುತ್ತಿದೆಯೋ ಯಾರಿಗೂ ತಿಳಿದಿಲ್ಲ. ಮುಖ್ಯವಾಗಿ ಗಮನಿಸತಕ್ಕ ವಿಷಯವೇನೆಂದರೇ! ಅಷ್ಟಮಿ ಗ್ರಂಥಿಯಿಂದ ಯಾವ ರಸವೂ ಊರುವುದಿಲ್ಲ, ಅದರಲ್ಲಿರುವ ಆತ್ಮಶಕ್ತಿ, ಎಲ್ಲಾ ಗ್ರಂಥಿಗಳಿಗು, ಕಾಣಿಸದ ಕಿರಣಗಳ ಮೂಲಕ ಹೋಗುತ್ತಿದೆ. ಹಾಗೆಯೇ ಸಪ್ತಮಿ ಕೇಂದ್ರದಲ್ಲಿರುವ ಆತ್ಮಶಕ್ತಿ, ಬ್ರಹ್ಮನಾಡಿ ಮೂಲಕ ಶರೀರವೆಲ್ಲಾ ಹರಡುತ್ತಿದೆ. ಆತ್ಮಶಕ್ತಿ ಏಳು ಕೇಂದ್ರಗಳ ಮೂಲಕ ಎಷ್ಟು ಪ್ರಸಾರವಾಗುತ್ತಿದೆಯೋ, ಅದಕ್ಕೆ ಸಮಾನವಾಗಿ ಆತ್ಮಶಕ್ತಿ, ಏಳು ಗ್ರಂಥಿಗಳ ಮೂಲಕ ಹೋಗುತ್ತಿದೆ. ಆದ್ದರಿಂದ ಗಾದೆಯಲ್ಲಿ ಪಟ್ಟಣ ತಿರುಗಿದರೂ ಏಳು ಸೀರೆಗಳೇ, ಹಳ್ಳಿ ತಿರುಗಿದರೂ ಏಳೇ ಸೀರೆಗಳು ಎಂದು ಹೇಳಿದ್ದಾರೆ. ಈ ಗಾದೆಯಲ್ಲಿ, ಹಳ್ಳಿ ಪಟ್ಟಣವೆಂದು ರಸ ಗ್ರಂಥಿಗಳನ್ನು, ನಾಡಿಕೇಂದ್ರಗಳನ್ನು ಹೇಳಿದ್ದಾರೆ. ಎರಡರಲ್ಲಿ ಸಮಾನವಾಗಿ ಶಕ್ತಿ ಖರ್ಚಾಗುತ್ತಿದೆಯೆಂದು ಹೇಳುವುದಕ್ಕೆ, ಹಳ್ಳಿಗಳಲ್ಲಿ ಏಳು ಸೀರೆಗಳು, ಪಟ್ಟಣದಲ್ಲಿ ಏಳು ಸೀರೆಗಳೆಂದಿದ್ದಾರೆ ಶರೀರದಲ್ಲಿ ಆತ್ಮ ನಿಲಯವನ್ನು, ಅದರ ಉಪಯೋಗವನ್ನು ತಿಳಿಸುವುದಕ್ಕೆ ಈ ಗಾದೆಯನ್ನು ಹೇಳಿದ್ದಾರೆ. ಈ ಗಾದೆಯನ್ನು ಚೆನ್ನಾಗಿ ಅರ್ಥ ಮಾಡಿಕೊಂಡವನು,

ಪೂರ್ತಿಯಾಗಿ ಜ್ಞಾನ ತಿಳಿದು, ಚತುರ್ದಶಿ ನಂತರ ಹೇಳಲ್ಪಡುವ ಪೌರ್ಣಮಿ ಆಗಬಲ್ಲನು.

## 21. ನರನಿಗೆ ನಾಲ್ಕು ಅಂಶಗಳು

ಮನುಷ್ಯ ಹುಟ್ಟಿದ ನಂತರ ಯಕ್ತವಯಸ್ಸು ಬರುವವರೆಗು ತಾಯಿತಂದೆಯರ ಮೇಲೆ ಆಧಾರಬಿದ್ದು ಬದುಕುತ್ತಿರುತ್ತಾನೆ. ನಂತರ ಸ್ವತಃವಾಗಿ ಬದುಕುವುದಕ್ಕೆ ಮನುಷ್ಯ ಅಭ್ಯಾಸವಾಗುತ್ತಿದ್ದಾನೆ. ಒಂದು ಊರಿನಲ್ಲಿ ಒಬ್ಬ ರೈತನಿಗೆ ನಾಲ್ಕುಜನ ಗಂಡುಮಕ್ಕಳು ಇದ್ದಾರೆ. ಆ ರೈತನಿಗೆ, ಆಸ್ತಿ ಎಲ್ಲವೂ ನಾಲ್ಕು (4) ಎಕರೆಗಳ ಹೊಲ ಇದೆ. ಮಕ್ಕಳೆಲ್ಲರೂ ದೊಡ್ಡವರಾದ ನಂತರ, ತನ್ನ ಆಸ್ತಿಯನ್ನು ತಂದೆ ನಾಲ್ಕುಜನ ಗಂಡುಮಕ್ಕಳಿಗೆ ಹಂಚಿ ಕೊಟ್ಟಿದ್ದಾನೆ. ಒಬ್ಬೊಬ್ಬರಿಗೆ ಒಂದು ಎಕರೆ ಹೊಲ ಬಂದಿದೆ. ಮೂವರು ಮಕ್ಕಳು ಓದಿಕೊಂಡಿದ್ದಾರೆ, ಅವರು ಅಮೇರಿಕಾಗೆ ಹೋಗಿ ಉದ್ಯೋಗ ಮಾಡುತ್ತಿದ್ದಾರೆ. ಎಲ್ಲರಿಗಿಂತ ಚಿಕ್ಕವನು ಓದಿಕೊಳ್ಳಲಿಲ್ಲ. ಆದ್ದರಿಂದ ಇಂಡಿಯಾದಲ್ಲಿಯೇ ಇದ್ದು, ಹೊಲದ ಕೆಲಸವನ್ನು ಮಾಡಿಕೊಳ್ಳುತ್ತಿದ್ದಾನೆ. ನಾಲ್ಕು ಎಕರೆಗಳ ಹೊಲವನ್ನು ನಾಲ್ಕುಜನರಿಗೆ ಹಂಚುವಾಗ, ಮೊದಲ ಎಕರೆಯನ್ನು ದೊಡ್ಡವನಿಗೆ ಕೊಟ್ಟಿದ್ದಾನೆ. ನಂತರ ಇರುವುದನ್ನು ಎರಡನೆಯವನಿಗೆ, ಆ ನಂತರ ಅದನ್ನು ಮೂರನೆಯವನಿಗೆ ಕೊಟ್ಟು, ಕೊನೆಯ ಎಕರೆಯನ್ನು ಚಿಕ್ಕವನಿಗೆ ಕೊಟ್ಟಿದ್ದಾನೆ. ನಾಲ್ಕು ಎಕರೆಗಳ ಹೊಲ ನಾಲ್ಕು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದು, ಅದರಲ್ಲಿ ಮೊದಲ ಭಾಗ ದೊಡ್ಡವನದಾದ್ದರಿಂದ, ಚಿಕ್ಕವನು ಅದನ್ನು, ದೊಡ್ಡಣ್ಣನ ಹೊಲ ಎನ್ನುತ್ತಿದ್ದನು. ಹಾಗೆಯೇ ಎರಡನೆ ಭಾಗವನ್ನು, ಎರಡನೆ ಅಣ್ಣನ ಹೊಲವೆಂದು ಹೇಳುತ್ತಿದ್ದನು, ಮೂರನೆ ಭಾಗವಾದುದನ್ನು, ಚಿಕ್ಕಣ್ಣನ ಹೊಲ ಎಂದು ಹೇಳುತ್ತಿದ್ದನು. ಕೊನೆಯ ಎಕರೆ, ಚಿಕ್ಕವನಾದ ತನ್ನದೇ ಆದ್ದರಿಂದ ಮೊದಲಿರುವ ಭಾಗದಿಂದ ಕ್ರಮವಾಗಿ, ಮೂರು ಭಾಗಗಳಿಗು ದೊಡ್ಡಣ್ಣ, ಎರಡನೆ ಅಣ್ಣ, ಚಿಕ್ಕಣ್ಣ ಭಾಗಗಳೆಂದು ಹೆಸರಿಟ್ಟುಕೊಂಡಿದ್ದಾನೆ. ಚಿಕ್ಕವನ ಹೆಸರು ಉತ್ತಣ್ಣ ಆದ್ದರಿಂದ, ಆ ಊರಿನವರು ಯಾರಾದರೂ, ಚಿಕ್ಕವನ ಹೊಲವನ್ನು ಇದು ಉತ್ತಣ್ಣನ ಹೊಲ ಎನ್ನುತ್ತಿದ್ದರು. ಈ ವಿಧವಾಗಿ ನಾಲ್ಕು ಭಾಗಗಳಾಗಿರುವ ನಾಲ್ಕು ಎಕರೆಗಳ ಹೊಲವು, ನಾಲ್ಕು

ಹೆಸರುಗಳಿಂದ ದೊಡ್ಡಣ್ಣನ ಹೊಲ, ಎರಡನೆ ಅಣ್ಣನ ಹೊಲ, ಚಿಕ್ಕಣ್ಣನ ಹೊಲ, ಉತ್ತಣ್ಣನ ಹೊಲ ಎಂದು ಕರೆಯಲ್ಪಡುತ್ತಿದೆ.

ಚಿಕ್ಕವನಾದ ಉತ್ತಣ್ಣನಿಗೆ (4) ನಾಲ್ಕು ಎಕರೆಗಳ ಹೊಲವನ್ನು ಸಾಗುವಳಿ ಮಾಡುವುದಕ್ಕೆ ಸಾಧ್ಯವಾಗಲಿಲ್ಲ. ತನ್ನ ಮೂವರು ಅಣ್ಣಂದಿರ ಹೊಲವನ್ನು ಸಾಗುವಳಿ ಮಾಡುವುದಕ್ಕೇ ತನ್ನ ಸಹನೆ ಸರಿಹೋಗುತ್ತಿತ್ತು. ಇನ್ನೂ ಸ್ವಲ್ಪ ಶ್ರಮಪಟ್ಟರೆ, ತನ್ನ ಸ್ವತಃ ಹೊಲವಾದ ಕೊನೆಯ ಎಕರೆಯನ್ನು ಸಾಗುವಳಿ ಮಾಡಬಹುದು. ಆದರೇ ಆತನು ಮೂರು ಭಾಗಗಳಲ್ಲಿಯೇ ಶ್ರಮಪಡುತ್ತಾ, ಕೊನೆಯ ಭಾಗದಲ್ಲಿ ಸ್ವಲ್ಪವೂ ಕೆಲಸ ಮಾಡದೆ ಅದನ್ನು ಬೀಳು ಇಟ್ಟಿದ್ದಾನೆ. ಒಂದು ದಿನ, ತನಗೆ ತಂದೆಯ ನಂತರ ತಂದೆಯಾದ ದೊಡ್ಡಪ್ಪ ಬಂದು, ತನ್ನ ಸ್ವತಃ ಹೊಲವನ್ನು ಏಕೆ ಬೀಳು ಇಟ್ಟಿದ್ದೀಯಾ ಎಂದು ಕೇಳಿದ್ದಾನೆ. ಅದಕ್ಕೆ ಉತ್ತಣ್ಣ ಸಮಯಯ ಸಾಕಾಗಲಿಲ್ಲ. ಮೂವರು ಅಣ್ಣಂದಿರ ಹೊಲವನ್ನು ಸಾಗುವಳಿ ಮಾಡುವುದಕ್ಕೇ ಕಾಲ ಸರಿಹೋಗುತ್ತಿದೆಯೆಂದು ಉತ್ತರ ಹೇಳಿದನು. ಅದಕ್ಕೆ, ಆತನ ದೊಡಪ್ಪ ಆತನಿಗೆ ಬುದ್ಧಿ ಹೇಳಿ "ಪೂರ್ತಿ ನಿಮ್ಮ ಅಣ್ಣಂದಿರ ಹೊಲದಲ್ಲಿಯೇ ಕೆಲಸ ಮಾಡುತ್ತಾ, ನಿನ್ನ ಹೊಲವನ್ನು ವ್ಯರ್ಥ ಮಾಡಿ ಕೊಂಡಿದ್ದೀಯಾ. ನಿಮ್ಮ ಅಣ್ಣಂದಿರ ಹೊಲದಲ್ಲಿಯೇ 12 ಗಂಟೆಗಳ ಕಾಲ ಕಳೆಯುತ್ತಿದ್ದೀಯಾ. ಮೂವರು ಅಣ್ಣಂದಿರ ಹೊಲದಲ್ಲಿ ಒಂದೊಂದರಲ್ಲಿ ನಾಲ್ಕು ಗಂಟೆಗಳು ಕೆಲಸ ಮಾಡುವುದಕ್ಕಿಂತ, ಮೂರು ಗಂಟೆಗಳ ಕಾಲ ಕೆಲಸ ಮಾಡಿದರೆ, ಮೂರು ಗಂಟೆಗಳ ಕಾಲ ಉಳಿಯುತ್ತದೆ ಅಲ್ಲವೇ! ಆ ಮೂರು ಗಂಟೆಗಳ ಕಾಲ ನೀನು ನಿನ್ನ ಹೊಲದಲ್ಲಿ ಕೆಲಸ ಮಾಡಿದರೆ, ನಿನ್ನ ಹೊಲ ಕೂಡಾ ಸಾಗುವಳಿ ಯಾಗುತ್ತದೆ. ನಿನ್ನ ಹೊಲ ಸಾಗುವಳಿ ಯಾಗುವುದೇ ಅಲ್ಲದೇ ಬೆಳೆದ ಬೆಳೆಯೆಲ್ಲವೂ ನಿನ್ನದೇ ಆಗುತ್ತದೆ. ನಿಮ್ಮ ಅಣ್ಣಂದಿರ ಹೊಲದಲ್ಲಿ ಕೆಲಸ ಮಾಡಿದರೂ, ಬಂದಿರುವ ಫಲಿತದಲ್ಲಿ ಅರ್ಧ ನಿಮ್ಮ ಅಣ್ಣನವರಿಗೆ ಕೊಟ್ಟರೆ ನಿನಗೆ ಉಳಿಯುವುದು ಅರ್ಧವೇ ಅಲ್ಲವೇ! ಹಾಗಲ್ಲದೇ, ನಿನ್ನ ಹೊಲದಲ್ಲಿಯೇ ನೀನು ಮಾಡಿಕೊಂಡರೆ, ಬಂದಿರುವ ಫಲಿತವೆಲ್ಲ ನಿನ್ನದೇ ಆಗುತ್ತದೆ ಅಲ್ಲವೇ! ಒಂದುವೇಳೆ ಅವುಗಳಲ್ಲಿ ಮಾಡಿ, ನನ್ನದರಲ್ಲಿ ಮಾಡಲಾರೆನು ಎಂದು ನೀನು ಅಂದರೇ, ಆ ಮಾತನ್ನು ನಾನು ಸ್ವಲ್ಪವೂ ಒಪ್ಪಿಕೊಳ್ಳುವುದಿಲ್ಲ.

ನಿನಗೆ ಅಷ್ಟು ಕೈಲಾಗದಿರುವಾಗ ನಿಮ್ಮ ಅಣ್ಣಂದಿರ ಹೊಲವನ್ನು ಬಿಟ್ಟು, ನಿನ್ನ ಹೊಲವನ್ನು ಮಾತ್ರ ಮಾಡಿಕೊ. ನಿನ್ನ ಅಣ್ಣನವರ ಹೊಲವನ್ನು ನೀನು ಮಾಡದಿದ್ದರೂ, ನಿನ್ನನ್ನು ದಂಡಿಸುವವರು ಯಾರೂ ಇಲ್ಲ. ಮೋಹಗುಣದಲ್ಲಿ ಬಿದ್ದು, ನನ್ನ ಅಣ್ಣಂದಿರು ಎನ್ನುವ ಭ್ರಮೆಯಲ್ಲಿ ನಿನ್ನದಲ್ಲದ ಹೊಲದಲ್ಲಿ ಕೆಲಸ ಮಾಡಿ, ನಿನ್ನ ಹೊಲವನ್ನು ಬೀಳು ಬಿಟ್ಟಿದ್ದೀಯಾ. ಈಗಲಾದರೂ ಮೀರಿ ಹೋಗಿರುವುದು ಏನೂ ಇಲ್ಲ. ಕೈಲಾದರೆ ಎಲ್ಲಾ ಭಾಗಗಳ ಹೊಲಗಳಲ್ಲಿ ಕೆಲಸ ಮಾಡು, ಕೈಲಾಗದಿದ್ದರೆ ಅವುಗಳನ್ನು ಬಿಟ್ಟು ನಿನ್ನದು ಮಾತ್ರ ಮಾಡಿಕೊ. ದೊಡ್ಡವನು ನಾನು ಹೇಳುತ್ತಿದ್ದೇನೆ. ಆದ್ದರಿಂದ ನನ್ನ ಮಾತನ್ನು ಕೇಳಿದರೆ ಒಳ್ಳೆಯದಾಗುತ್ತದೆ." ಎಂದು ಹೇಳಿದ್ದಾನೆ.

ತನ್ನ ತಂದೆಗಿಂತ ದೊಡ್ಡವನಾದ ದೊಡ್ಡಪ್ಪ ಬಂದು, ತನ್ನ ತಪ್ಪನ್ನು ತೋರಿಸಿ ದಂಡಿಸಿದ ನಂತರ, ಆತನು ಹೇಳಿದಂತೆ ನಡೆಯದೆಹೋದರೆ ಚೆನ್ನಾಗಿರುವುದಿಲ್ಲವೆಂದು ಗ್ರಹಿಸಿದ ಉತ್ತಣ್ಣ, ತನ್ನ ಹೊಲದಲ್ಲಿ ಕೂಡಾ ಕೆಲಸ ಮಾಡುವುದಕ್ಕೆ ಶುರು ಮಾಡಿದ್ದಾನೆ. ತನ್ನ ಅಣ್ಣನವರ ಹೊಲಗಳಲ್ಲಿ ಕೂಡಾ ಸ್ವಲ್ಪಮಟ್ಟಿಗೆ ಕೆಲಸ ಮಾಡುತ್ತಾ, ಸ್ವಲ್ಪ ಸಮಯ ತನ್ನ ಹೊಲದಲ್ಲಿ ಕೂಡಾ ಕೆಲಸ ಮಾಡುವುದಕ್ಕೆ ಉತ್ತಣ್ಣ ಅಭ್ಯಾಸ ಮಾಡಿಕೊಂಡಿದ್ದಾನೆ. ತನ್ನ ಅಣ್ಣನವರ ಮೂರು ಎಕರೆಗಳು ಚೌಳು ಭೂಮಿಗಳಾಗಿರುವುದರಿಂದ, ಎಷ್ಟು ಕಷ್ಟಪಟ್ಟರೂ ಸ್ವಲ್ಪವೂ ಕೂಡ ಬೆಳೆ ಬೆಳೆಯುತ್ತಿರಲಿಲ್ಲ. ಅದೇ ತನ್ನ ಹೊಲ ಸಾರವಂತ ವಾದ್ದರಿಂದ, ಸ್ವಲ್ಪ ಸಮಯ ಕೆಲಸ ಮಾಡಿದರೂ ಬೆಳೆ ಚೆನ್ನಾಗಿ ಬೆಳೆಯುತ್ತಿತ್ತು. ಹೀಗೆ ಕೆಲವು ವರ್ಷಗಳು ಮಾಡಿದಾಗ, ಸಾರವಂತವಾದ ತನ್ನ ನೆಲೆದಲ್ಲಿ ಸಾಗುವಳಿ ಮಾಡಿದರೆ ಎಷ್ಟೋ ಬೆಳೆಯುವುದು, ತನ್ನ ಮೂವರು ಅಣ್ಣಂದಿರ ಮೂರು ಎಕರೆಗಳಲ್ಲಿ ಸಾಗುವಳಿ ಮಾಡಿದರೂ, ಆ ಮೂರೂ ಸಾರವಂತವಾದ ಹೊಲಗಳು ಅಲ್ಲದಿರುವುದರಿಂದ ಫಲಿತವು ಶೂನ್ಯವಾಗಿರುವುದೂ, ಪ್ರತ್ಯಕ್ಷವಾಗಿ ಗ್ರಹಿಸಿದ ಉತ್ತಣ್ಣ, ತಾನು ಆ ಮೂರು ಎಕರೆಗಳನ್ನು ಬಿಟ್ಟು, ತನ್ನ ಹೊಲದಲ್ಲಿ ಮಾತ್ರವೇ ಕೆಲಸ ಮಾಡಿಕೊಳ್ಳುವುದರಲ್ಲಿ ಎಷ್ಟೋ ಲಾಭವಿದೆಯೆಂದು ತಿಳಿದು, ಅಂದಿನಿಂದ ತನ್ನ ಹೊಲದಲ್ಲಿ ಕೆಲಸ ಮಾಡುತ್ತಾ, ಬೆಳೆದ ಬೆಳೆಯಿಂದ ಲಾಭವನ್ನು ಪಡೆಯುತ್ತಾ, ಅತಿ ಕಡಿಮೆ ಕಾಲದಲ್ಲಿಯೇ ಕೋಟಿಶ್ವರನಾಗಿ ಹೋದನು.

ಇದೆಲ್ಲವೂ ಓದಿದವರಿಗೆ ಸ್ವಲ್ಪ ಬೇಸರ ಬಂದು, ನಾಲ್ವರು ಅಣ್ಣತಮ್ಮಂದಿರು, ನಾಲ್ಕು ಎಕರೆಗಳು, ಚೌಳು ಭೂಮಿ, ಸಾಗುಭೂಮಿ ಇಷ್ಟು ಕಥೆ ನಮಗೇತಕ್ಕೆ? ಇದರಲ್ಲಿ ನಾವು ತಿಳಿದುಕೊಳ್ಳಬೇಕಾಗಿರುವುದು ಏನಾದರೂ ಇದೆಯಾ? ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೇ! ಇದೆಲ್ಲವೂ ತಪ್ಪದೇ ನಮಗೆ ಎಷ್ಟೋ ಅಗತ್ಯ. ಸತ್ಯ ಹೇಳಬೇಕೆಂದರೇ, ನಿನಗೆ ಎಷ್ಟೋ ಅಗತ್ಯ. ಏಕೆಂದರೇ! ಇದೆಲ್ಲವೂ ನಿನ್ನ ಕಥೆಯೇ! ಅರ್ಥವಾಗಲಿಲ್ಲವಾ! ಆದರೇ ಅರ್ಥವಾಗುವಂತೆ ಹೇಳುತ್ತೇನೆ ಕೇಳು. ದೇವರೆನ್ನುವ ತಂದೆ, ನೀನು ಹುಟ್ಟಿದಾಗಲೇ ಸ್ವಲ್ಪ ನಿನಗೆ ಸ್ವಲ್ಪ ಕಾಣಿಸದ ಹೊಲವನ್ನು ಕೊಟ್ಟಿದ್ದಾನೆ. ಅದೇ ಗುಣಚಕ್ರದಲ್ಲಿ ಇದೆ. ಗುಣಚಕ್ರದಲ್ಲಿನ ತಾಮಸ ಭಾಗ ದೊಡ್ಡಣ್ಣನ ಹೊಲವಾಗಿದ್ದು, ರಾಜಸಭಾಗ ಎರಡನೆ ಅಣ್ಣನದಾಗಿದ್ದು, ಸಾತ್ತ್ವಿಕ ಭಾಗವು ಚಿಕ್ಕಣ್ಣನದ್ದು. ಮೂರು ಭಾಗಗಳ ಕೊನೆಯಲ್ಲಿರುವ ಭಾಗ ಉತ್ತಣ್ಣನಾದ ನಿನ್ನದು. ನಿನ್ನ ಸ್ವತಃ ಭಾಗ, ಮೂರು ಭಾಗಗಳ ನಂತರ ಇರುವ ಆತ್ಮಭಾಗ ಇಲ್ಲವೇ ಯೋಗಭಾಗ. ನೀನು ಜೀವಿಯು. ನಿನ್ನ ಸ್ವತಃ ಸ್ಥಾನ ಆತ್ಮಸ್ಥಾನವಾದ ಮೂರು ಗುಣಭಾಗಗಳ ಕೊನೆಯ ಸ್ಥಾನ. ನಿನ್ನ ಸ್ಥಾನದಲ್ಲಿ ಏನೂ ಇರುವುದಿಲ್ಲ. ಆದ್ದರಿಂದ ನಿನ್ನ ಸ್ಥಾನವನ್ನು ಅನುಸರಿಸಿ ಉತ್ತಣ್ಣ ಎಂದು ಹೆಸರು ಇಡಲಾಗಿದೆ. ನೀನು ಹುಟ್ಟಿದ್ದು ಮೊದಲು ಕಥೆಯಲ್ಲಿ ನಿನ್ನ ದೊಡ್ಡಣ್ಣನ ಭಾಗವೆಂದು ಹೆಸರಿಟ್ಟು ಹೇಳಿದರೂ ತಾಮಸದಲ್ಲಾಗಲಿ, ಎರಡನೆ ಅಣ್ಣನ ಭಾಗವೆಂದು ಹೆಸರಿಟ್ಟು ಹೇಳಿದ ರಾಜಸ ಭಾಗದಲ್ಲಾಗಲಿ, ಚಿಕ್ಕಣ್ಣನ ಭಾಗವೆಂದು ಹೆಸರಿಟ್ಟು ಹೇಳಿದ ಸಾತ್ತ್ವಿಕ ಭಾಗದಲ್ಲಾಗಲಿ ಕೆಲಸ ಮಾಡುತ್ತಲೇ ಇದ್ದೀಯಾ. ಆದರೇ ನಿನ್ನ ಸ್ವಂತ ಭಾಗವಾದ ಗುಣಭಾಗಗಳ ಕೊನೆಯಲ್ಲಿನ, ನಾಲ್ಕನೆ ಸ್ಥಾನದೊಳಗೆ, ನೀನು ಎಂದಿಗೂ ಹೋಗಿಲ್ಲ, ಅಲ್ಲಿ ಯಾವ ಕೆಲಸವನ್ನು ನೀನು ಮಾಡಲಿಲ್ಲ. ನೀನು ಹುಟ್ಟಿದಾಗಿನಿಂದ ಕಥೆಯಲ್ಲಿನ ಉತ್ತಣ್ಣ, ತನ್ನ ಹೊಲವನ್ನು ಬಿಟ್ಟು ತನ್ನ ಮೂವರು ಅಣ್ಣನವರ ಚೌಳು ಭೂಮಿಯಲ್ಲಿ ಕಷ್ಟಪಟ್ಟು ಕೆಲಸ ಮಾಡಿದಂತೆ, ಉತ್ತಣ್ಣ ಶ್ರಮಪಟ್ಟಂತೆ, ನೀನು ಕೂಡಾ ನಿನ್ನ ಸ್ವಂತ ಸ್ಥಾನಗಳು ಅಲ್ಲದಂತಹ ತಾಮಸ, ರಾಜಸ, ಸಾತ್ತ್ವಿಕ ಗುಣಭಾಗಗಳಲ್ಲಿ ಅನಗತ್ಯವಾಗಿ ಶ್ರಮಪಡುತ್ತಾ, ನಿನ್ನ ಸ್ವಂತ ಭಾಗವಾದ

ಯೋಗಭಾಗವನ್ನು ಬಿಟ್ಟಿದ್ದೀಯಾ. ನಿನ್ನ ಸ್ವಂತ ಸ್ಥಾನವನ್ನು ಮರೆತುಹೋಗಿ, ಅದು ಒಂದು ಇದೆಯೆಂದು ಕೂಡಾ ತಿಳಿಯದ ಸ್ಥಿತಿಯೊಳಗೆ ಹೋಗಿದ್ದೀಯಾ.

ಇಂತಹ ಕೆಟ್ಟ ಸ್ಥಿತಿಯಲ್ಲಿರುವ ನಿನ್ನನ್ನು ಎಚ್ಚರಿಸಿ, ರಕ್ಷಿಸುವುದಕ್ಕೆ, ನಿನ್ನ ಹುಟ್ಟು ಪೂರ್ವೋತ್ತರಗಳು ತಿಳಿದವನು ಯಾರಾದರೂ ಇದ್ದರೆ, ಆತನು ಮಾತ್ರ ಬಂದು ಹೇಳಬಲ್ಲನು. ಶರೀರದ ಒಳಗೆ ನಿನ್ನ ಸ್ಥಿತಿ ಏನೊ ತಿಳಿದವನು, ನಿನಗೆ ತಂದೆಯಂತಹವನು, ತಂದೆಗೆ ಸಮಾನವಾದವನು ಆದ ಗುರುಮಾತ್ರ, ನೀನು ಇರಬೇಕಾದ ಸ್ಥಿತಿ ಇದು ಎಂದು, ನೀನು ಇರುತ್ತಿರುವ ಸ್ಥಿತಿ ಇದುಯೆಂದು ಹೇಳಬಲ್ಲನು. ಆದರೇ ಕಥೆಯಲ್ಲಿ ಉತ್ತಣ್ಣನಿಗೆ ದೊಡ್ಡಣ್ಣ ಇದ್ದಾನೆ ಆದ್ದರಿಂದ, ಬಂದು ಉತ್ತಣ್ಣ ಒಳ್ಳೆಯವನಾಗುವುದಕ್ಕೆ ಎಚ್ಚರಿಸಿ, ಬುದ್ಧಿಹೇಳಿ, ತನ್ನ ಹೊಲದಲ್ಲಿ ಕೆಲಸ ಮಾಡಿಕೊಳ್ಳಲು ಹೇಳಿದ್ದಾನೆ. ಉತ್ತಣ್ಣನಿಗೆ ದೊಡ್ಡಪ್ಪ ಇರುವಂತೆ, ನಿನಗೂ ಒಬ್ಬ ದೊಡ್ಡ ತಂದೆಯಂತಹ ಗುರು ಇದ್ದಾರೆ, ಆತನು ನಿನಗೆ ಹಿತವು ಹೇಳಿ, ಮೂರು ಗುಣಗಳನ್ನು ಬಿಟ್ಟು ಆತ್ಮಭಾಗದಲ್ಲಿ ಸೇರಿ, ಯೋಗವನ್ನು ಮಾಡಿಕೊಳ್ಳಿ ರೆಂದು ಹೇಳಬಲ್ಲನು. ಆದರೇ ಭೂಮಿಮೇಲೆ ದೊಡ್ಡಪ್ಪರು ಇರುವವರು ಕೆಲವರೇ ಇರುವಂತೆ, ಗುರುವನ್ನು ಅಶ್ರಯಿಸಿದವರು ಕೆಲವರೇ ಇದ್ದಾರೆ. ಕೆಲವರಿಗೆ ಗುರುಗಳಿದ್ದರೂ, ಇದು ಒಳ್ಳೆಯದು, ಇದು ಕೆಟ್ಟದು ಎಂದು ಹೇಳುವ ಸ್ಥಿತಿಯಲ್ಲಿಲ್ಲ.

ಶರೀರವನ್ನು ಧರಿಸಿದ ಪ್ರತಿ ಜೀವಿಯು, ತಲೆಯಲ್ಲಿನ ಗುಣಚಕ್ರದಲ್ಲಿ ನಿವಾಸ ಇದ್ದಾನೆ. ಗುಣಚಕ್ರ, ನಾಲ್ಕು ಅಂಶಗಳಾಗಿ (ಭಾಗಗಳಾಗಿ) ಇದೆ. ಜೀವಿಯು ಶರೀರದಲ್ಲಿ ಇರುವವರೆಗು, ಆ ನಾಲ್ಕು ಭಾಗಗಳಲ್ಲಿಯೇ ಇರಬೇಕು. ಜೀವಿಗೆ, ಗುಣಚಕ್ರದಲ್ಲಿನ ನಾಲ್ಕು ಭಾಗಗಳೇ ನಿವಾಸವಾಗಿರುವುದನ್ನು, ಗಾದೆಯಲ್ಲಿ "ನರನಿಗೆ ನಾಲ್ಕು ಅಂಶಗಳು" ಎಂದು ಹೇಳಿದ್ದಾರೆ. ನರನಿಗೆ ನಾಲ್ಕು ಭಾಗಗಳೆಂದು ಅದರ ಅರ್ಥ. ಅಂಶ ಎಂದರೇ ಭಾಗವೆಂದು ಅರ್ಥ. ತಲೆಯಲ್ಲಿನ ನಾಲ್ಕು ಚಕ್ರಗಳ ಸಮುದಾಯ (FOUR WHEEL COMPLEX) ದಲ್ಲಿ ಕೆಳಗಿನ ಚಕ್ರವಾದ ಗುಣಚಕ್ರದಲ್ಲಿ ನಾಲ್ಕು ಭಾಗಗಳಿವೆ. ಕೆಳಗಿನ ಚಿತ್ರದಲ್ಲಿ ಗುಣಚಕ್ರದಲ್ಲಿನ ನಾಲ್ಕು ಭಾಗಗಳನ್ನು ನೋಡಬಹುದು. ಹಾಗೇ ಕೆಳಗೆ ಮತ್ತೊಂದು ಚಿತ್ರದಲ್ಲಿ ಶಿರಸ್ಸಿನಲ್ಲಿನ ನಾಲ್ಕು ಚಕ್ರಗಳನ್ನು ನೋಡಬಹುದು.




ಗುಣಚಕ್ರ




**ನಾಲ್ಕು ಚಕ್ರಗಳ ಸಮುದಾಯ**

ಕಥೆಯಲ್ಲಿ ಉತ್ತಣ್ಣ, ಚೌಳು ಭೂಮಿಯಾದ ಮೂರು ಹೊಲಗಳನ್ನು ಬಿಟ್ಟು ಸಾರವಂತವಾದ ತನ್ನ ಸ್ವಂತ ಹೊಲವನ್ನು ಸಾಗುವಳಿ ಮಾಡಿಕೊಂಡಂತೆ, ಯಾವ ಮನುಷ್ಯನಾದರೂ, ಸಾರವಿಲ್ಲದ ತಾಮಸ, ರಾಜಸ, ಸಾತ್ತ್ವಿಕ ಎನ್ನುವ ಮೂರು ಗುಣಭಾಗಗಳನ್ನು ಬಿಟ್ಟು, ಮಧ್ಯದಲ್ಲಿ ಇಲ್ಲವೇ ಕೊನೆಯಲ್ಲಿರುವ ಗುಣರಹಿತ ಆತ್ಮಭಾಗ ಸೇರಿದವನು ಯೋಗಿ ಆಗುತ್ತಾನೆ. ಯೋಗಿ ಆದವನು, ಸ್ವಲ್ಪ ಕಾಲಕ್ಕೆ ಪೂರ್ತಿಯಾಗಿ ಜ್ಞಾನಾಗ್ನಿ ಇರುವವನಾಗಿ, ಕರ್ಮರಹಿತನಾಗಿಹೋಗಿ, ಮೋಕ್ಷವನ್ನು ಹೊಂದಬಲ್ಲನು. ಮೋಕ್ಷವನ್ನು ಹೊಂದಿದವನು, ತಾನು ದೇವರಲ್ಲಿ ಐಕ್ಯವಾಗಿಹೋಗಿ, ಈಶ್ವರನಾಗಿ ಬದಲಾಗಿಹೋಗುತ್ತಾನೆ.

# 22. ನಿತ್ಯ ಸಾಯುವವನಿಗೆ ಅಳೊದ್ಯಾರು?

ಮನುಷ್ಯನೊಂದರ ಸಾವುಹುಟ್ಟುಗಳು ಎಲ್ಲರಿಗೂ ತಿಳಿದಿರುವವೇ. ಒಂದುಸಲ ಹುಟ್ಟಿದರೇ, ಸಾವು ಕೆಲವು ವರ್ಷಗಳ ನಂತರ ಬರುತ್ತದೆಂದು ಎಲ್ಲರೂ ಅಂದುಕೊಳ್ಳುವುದು ನಡೆಯುತ್ತಿದೆ. ಹುಟ್ಟುವುದು ಸತ್ಯ, ಹುಟ್ಟಿದವನು ಸಾಯುವುದು ಸತ್ಯ ಎಂದು ಎಲ್ಲರೂ ಅಂದುಕೊಳ್ಳುವುದು ಸಹಜವೇ. ಇದೇ ವಿಷಯವನ್ನೇ ಭಗವದ್ಗೀತೆಯಲ್ಲಿ ಸಾಂಖ್ಯಯೋಗದಲ್ಲಿ, 27ನೇ ಶ್ಲೋಕದಲ್ಲಿ "ಜಾತಸ್ಯ ಹಿ ದ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯಚ" "ಹುಟ್ಟಿದವನು ಸಾಯುವುದು ತಪ್ಪಲ್ಲ, ಸತ್ತವನು ಹುಟ್ಟುವುದು ತಪ್ಪಲ್ಲ" ಎಂದು ಹೇಳಲ್ಪಟ್ಟಿದೆ. ಹುಟ್ಟಿದ ನಂತರ ಸಾಯುವುದೂ, ಸತ್ತ ನಂತರ ಹುಟ್ಟುವುದೂ ಅನಿವಾರ್ಯ ಕಾರ್ಯವಾಗಿದೆಯೆಂದು ಜ್ಞಾನಿಗಳೆಲ್ಲರಿಗೂ ತಿಳಿದಿದೆ. ಆದರೇ ಹುಟ್ಟಿದವನು ಯಾವಾಗ ಸಾಯುತ್ತಾನೆ, ಸತ್ತವನು ಯಾವಾಗ ಹುಟ್ಟುತ್ತಾನೆ ಎನ್ನುವ ನಿಯಮವನ್ನು ಮಾತ್ರ ಹೇಳಲಾರನು. ನಮಗೆ ತಿಳಿದ ಜ್ಞಾನದ ಪ್ರಕಾರ ಪ್ರಾರಬ್ಧಕರ್ಮ ಮುಗಿದುಹೋದಾಗ, ಮರಣ ಸಂಭವಿಸುತ್ತದೆಂದು, ಹಾಗೆ ಮರಣಿಸಿದವನು ಹಳೆ ಶರೀರವನ್ನು ಬಿಟ್ಟುಹೋಗಿ, ಪುನಃ ಜನ್ಮಿಸುವಾಗ ಹೊಸ ಶರೀರವನ್ನು ಧರಿಸಿ, ಹೊಸ ಪ್ರಾರಬ್ಧಕರ್ಮದಿಂದ ಹುಟ್ಟುತ್ತಾನೆಂದು ತಿಳಿದುಕೊಂಡಿದ್ದೇವೆ. ಇಂತಹ ಸಾವುಗಳು, ಹುಟ್ಟುಗಳು ನಡೆಯುತ್ತಿರುವುದು, ಎಲ್ಲರಿಗೂ ಪ್ರತ್ಯಕ್ಷವಾಗಿ ತಿಳಿದ ವಿಷಯವೇ. ಹೀಗೆ ಎಲ್ಲರಿಗೂ ತಿಳಿದ ಸಾವು ಹುಟ್ಟುಗಳಿಂದ, ಹಳೆ ಶರೀರ ಹೋಗಿ ಹೊಸ ಶರೀರ ಬರುತ್ತಿದೆ. ಆದ್ದರಿಂದ ನಾವು ಇಲ್ಲಿಯವರೆಗು ನೋಡಿದ ಮರಣಗಳೆಲ್ಲವೂ ಜೀವಿಗಾ? ಶರೀರಕ್ಕಾ? ಎಂದು ಪ್ರಶ್ನಿಸಿಕೊಂಡು ನೋಡಿದಾಗ, ಇದಕ್ಕೆ ಉತ್ತರವನ್ನು ಹುಡುಕುವುದು ಸ್ವಲ್ಪ ಕಷ್ಟವೇ ಆದರೂ, ಈ ಮರಣಗಳೆಲ್ಲವೂ ಶರೀರ ಬದಲಾವಣೆಗೇಯೆಂದು ಹೇಳಬಹುದು. ಶರೀರ ಪ್ರಾರಬ್ಧಕರ್ಮದಿಂದ ಏರ್ಪಡುತ್ತಿದೆ. ಆದ್ದರಿಂದ ಶರೀರ ಮರಣ ಸಂಭವಿಸುವಾಗ ಪ್ರಾರಬ್ಧ ಕೂಡಾ ಹೊಸದು ಬರುತ್ತಿದೆ. ಎಲ್ಲರಿಗೂ ತಿಳಿಯುವುದು ಶರೀರ ಮರಣ, ಆದ್ದರಿಂದ ಮರಣಿಸಿದವನ ಶರೀರವನ್ನು ನೋಡಿ ಅಳುತ್ತಿದ್ದಾರೆ. ಮರಣದಲ್ಲಿ ಜೀವಿಯು, ಕ್ಷಣಗಳ ಮೇಲೆ ಶರೀರವನ್ನು ಬದಲಾಗುತ್ತಿದ್ದಾನೆ. ಅಷ್ಟೇಹೊರತು ಜೀವಿಯಲ್ಲಿ ಯಾವ ಬದಲಾವಣೆ ಇಲ್ಲ. ಕೇವಲ ಶರೀರ ಕರ್ಮದಲ್ಲಿಯೇ ಬದಲಾವಣೆ ನಡೆಯುತ್ತಿದೆ. ಜೀವಿಯು

ಮರಣದಲ್ಲಿಯೂ ಇದ್ದಾನೆ, ಜನ್ಮದಲ್ಲಿಯೂ ಇದ್ದಾನೆ. ಮರಣದಲ್ಲಿರುವ ಶರೀರ ಮಾತ್ರ ಜನನದಲ್ಲಿ ಇರುವುದಿಲ್ಲ. ಇದು ಮರಣವೊಂದರ ವಿಷಯ. ಮರಣ ವಿಷಯ ಪೂರ್ತಿಯಾಗಿ ತಿಳಿಯಬೇಕೆಂದರೇ **"ಮರಣ ರಹಸ್ಯ"** ಎನ್ನುವ ಗ್ರಂಥವನ್ನು ಓದಿರಿ. ಮರಣ ಕೆಲವು ವರ್ಷಗಳಿಗೊಂದುಸಲ ನಡೆಯುತ್ತಿರುತ್ತದೆ, ನಿತ್ಯ ನಡೆಯುವುದಿಲ್ಲ.

ನಿತ್ಯ ಮರಣದಂತಾದ್ದು ಮತ್ತೊಂದು ಇದೆ. ಅದು ಮರಣದಂತಾದ್ದೇ ಹೊರತು ಮರಣವಲ್ಲ. ಭಗವದ್ಗೀತೆಯಲ್ಲಿ ಪ್ರಳಯ ಎನ್ನುವ ಒಂದು ಮಾತು ಇದೆ. ಪ್ರಳಯದಲ್ಲಿ ಜೀವಿಯು ಇಲ್ಲದಂತೆ ಹೋಗುತ್ತಿದ್ದಾನೆ. ಜೀವಿಯು ಒಬ್ಬನೇ ಅಲ್ಲ ಸೃಷ್ಠಿಯಲ್ಲಿ ಏನಾದರೆ ಇದೆಯೋ, ಅದೆಲ್ಲವೂ ಇಲ್ಲದಂತೆ ಹೋಗುವುದನ್ನು ಪ್ರಳಯ ಎನ್ನುತ್ತಿದ್ದೇವೆ. ಈಗ ಪ್ರಳಯವನ್ನು ಕುರಿತು ಅಗತ್ಯವಾದ ವಿಷಯವನ್ನು ಮಾತ್ರವೇ ಪ್ರಸ್ತಾಪಿಸುತ್ತೇನೆ. ಒಂದುವೇಳೆ ನಿಮಗೆ ಪ್ರಳಯವನ್ನು ಕುರಿತಾದ ಪೂರ್ತಿ ಸಮಾಚಾರ ಬೇಕೆಂದರೇ, **"ಕಲಿಯುಗ ಎಂದಿಗೂ ಯುಗಾಂತ ಆಗುವುದಿಲ್ಲ"** ಎನ್ನುವ ಗ್ರಂಥವನ್ನು ಓದಿರಿ. ಪ್ರಳಯದಲ್ಲಿ ಜೀವಿಯೂ, ಪ್ರಪಂಚವೂ, ಎಲ್ಲವೂ ಇಲ್ಲದೇ ಹೋಗಿ, ನಂತರ ಸ್ವಲ್ಪಕಾಲಕ್ಕೆ ಪ್ರಭವ ನಡೆಯುತ್ತಿದೆ. ಈ ವಿಷಯವನ್ನು ಕುರಿತು ಭಗವದ್ಗೀತೆಯಲ್ಲಿ ಅಕ್ಷರ ಪರಬ್ರಹ್ಮ ಯೋಗದಲ್ಲಿ 19ನೇ ಶ್ಲೋಕದಲ್ಲಿ ಹೇಳಿದ್ದಾರೆ.

**ಶ್ಲೋ॥ ಭೂತಗ್ರಾಮ ಸ್ಸ ಏವಾಯಂಭೂತ್ವಾ ಭೂತ್ವಾ ಪ್ರಲೀಯತೇ।**
**ರಾತ್ರ್ಯಾಗಮೇ ವಶಃ ಪಾರ್ಥ! ಪ್ರಭವ ತ್ಯಹರಾಗಮೇ ॥**

**ಭಾವಾರ್ಥ :–** ಸಕಲ ಜೀವರಾಶಿಗಳು ಹಗಲು ಜೀವಿಸುತ್ತಿವೆ, ರಾತ್ರಿಯಾದ ತಕ್ಷಣ ಪ್ರಳಯವನ್ನು ಹೊಂದುತ್ತಿವೆ. ಪುನಃ ಹಗಲಾದ ತಕ್ಷಣವೇ ಪ್ರಭವವನ್ನು ಹೊಂದುತ್ತಿವೆ. ಈ ವಿಧವಾಗಿ ಸಕಲ ಜೀವರಾಶಿಗಳು ಪ್ರಳಯ, ಪ್ರಭವಗಳನ್ನು ಹೊಂದುತ್ತಿವೆ. ಹೀಗೆ ರಾತ್ರಿ, ಹಗಲು ಪ್ರಳಯವನ್ನೂ, ಪ್ರಭವವನ್ನೂ ಕರ್ಮ ವಶದಲ್ಲಿ ಸಕಲ ಜೀವರಾಶಿಗಳು ನಿತ್ಯ ಹೊಂದುತ್ತಿವೆ.

ಪ್ರಳಯವನ್ನು ಹೊಂದಿದ ಜೀವಿಯು ಮರಣಿಸಿ, ಪ್ರಭವದಲ್ಲಿ ಹುಟ್ಟಿದಂತೆ ಲೆಕ್ಕಿಸಿಕೊಂಡರೂ, ಪ್ರಳಯದಲ್ಲಿ ಶರೀರ ಹೋಗುವುದಿಲ್ಲ, ಪ್ರಭವದಲ್ಲಿ ಹೊಸ

ಶರೀರ ಬರುವುದಿಲ್ಲ. ಪ್ರತಿ ದಿನ ನಿದ್ರೆಹೋಗುವುದನ್ನು ಪ್ರಳಯ ಹೊಂದಿದಂತೆ ಲೆಕ್ಕಿಸುತ್ತಿದ್ದೇವೆ. ಮನುಷ್ಯನ ನಿದ್ರೆ ಸಾವಿನಂತಾದ್ದು. ಹಾಗೇ ಎಚ್ಚರಿಕೆ ಹುಟ್ಟು ವಿನಂತಾದ್ದು. ಆ ಲೆಕ್ಕ ಪ್ರಕಾರ ಒಂದು ವಿಧವಾಗಿ ಜೀವಿಯು ನಿತ್ಯ ಮರಣಿಸಿದಂತೆ ಹೇಳಬಹುದು. ನಿತ್ಯ ಜೀವಿಯು ನಿದ್ರೆಯೊಳಗೆ ಹೋಗುವುದೇ, ನಿತ್ಯ ಮರಣಿಸಿದಂತೆ ಎಂದು ಹೇಳಬಹುದು. ಒಂದು ಪುಸ್ತಕವನ್ನು ಆಸಕ್ತಿಯಾಗಿ ಓದುವಾಗ, ಆ ಪುಸ್ತಕದಲ್ಲಿನ ವಿಷಯಗಳನ್ನು ಬುದ್ಧಿ ಚೆನ್ನಾಗಿ ಗ್ರಹಿಸುತ್ತಿರುವಾಗ ನಿದ್ರೆಬಂದರೇ, ಮನುಷ್ಯ ಪುಸ್ತಕವನ್ನು ಓದಲಾರನು. ಆಗ ಬುದ್ಧಿ ವಿಷಯವನ್ನು ಗ್ರಹಿಸಬೇಕೆಂದು ನೋಡಿದರೂ, ನಿದ್ರೆ ಬರುವುದರಿಂದ, ಬುದ್ಧಿಗೆ ತೀವ್ರ ಆತಂಕ ಏರ್ಪಡುತ್ತದೆ. ವಾಹನವನ್ನು ನಡೆಸುವಾಗ ನಿದ್ರೆ ಬಂದರೂ, ಪುಸ್ತಕವನ್ನು ಓದುತ್ತಿರುವಾಗ ನಿದ್ರೆ ಬಂದರೂ, ಸಿನಿಮಾ ನೋಡುವಾಗ ನಿದ್ರೆ ಬಂದರೂ, ಅದನ್ನು ಕುರಿತು ಚಿಂತಿಸುವುದು, ಬಾಧೆಪಡುವುದು ಬುದ್ಧಿ. ಆದ್ದರಿಂದ ನಿತ್ಯ ಸಾಯುವವನಿಗೆ ಅಳೋದು ಯಾರು? ಎನ್ನುವ ಪ್ರಶ್ನೆಗೆ, ಶರೀರದಲ್ಲಿನ ಬುದ್ಧಿ ಎಂದು ಉತ್ತರ ಹೇಳಬಹುದು.

## 23, ಮುಗಿದುಹೋದ ಮದುವೆಗೆ, ಮೇಳ ಏಕೆ?

ಒಬ್ಬ ಮನುಷ್ಯ, ದೇವರೊಳಗೆ ಐಕ್ಯವಾಗಬೇಕೆಂದರೇ, ಒಬ್ಬ ಮನುಷ್ಯ, ಮುಕ್ತಿ ಹೊಂದಬೇಕೆಂದರೇ, ಪ್ರತ್ಯೇಕಿಸಿ ಒಂದು ಕಾಲದಲ್ಲಿಯೇ ಅದು ನಡೆಯುತ್ತದೆ. ಸರ್ವ ಕರ್ಮಗಳೆಲ್ಲ ಇಲ್ಲದಂತೆ ಹೋಗಿ, ಕರ್ಮರಹಿತನಾದಾಗ, ಮನುಷ್ಯ ಮೋಕ್ಷವನ್ನು ಹೊಂದಬಹುದು. ಮೋಕ್ಷ ಎಂದರೇ ಪುನಃ ಜನ್ಮ ಇರದ ಸ್ಥಿತಿ. ಆ ಸ್ಥಿತಿ ಬರಬೇಕೆಂದರೇ ಎಂದಿಗೂ ಜನ್ಮಿಸದ ದೇವರೊಳಗೆ ಐಕ್ಯವಾಗಬೇಕಾಗಿರುತ್ತದೆ. ಹಾಗೆ ದೇವರೊಳಗೆ ಐಕ್ಯವಾಗಬೇಕೆಂದರೇ, ಅದಕ್ಕೆ ಪ್ರತ್ಯೇಕವಾದ ಕಾಲ ಒಂದು ಇದೆ. ಆ ಪ್ರತ್ಯೇಕವಾದ ಕಾಲದಲ್ಲಿಯೇ ಮರಣಿಸಿದವನು, ಪುನಃ ಜನ್ಮಿಸದೇ ಅವ್ಯಯನಾದ ದೇವರಲ್ಲಿ ಬೆರೆತು ಹೋಗುತ್ತಾನೆ. ಒಂದುವೇಳೆ ಆ ಕಾಲದಲ್ಲಿ ಯಾರು ಮರಣಿಸಿದರೂ, ಅವನಿಗೆ ಮೋಕ್ಷ ಲಭಿಸುತ್ತದಾ ಎಂದು ಪ್ರಶ್ನಿಸಿಕೊಂಡು ನೋಡಿದರೆ, ಹಾಗೆ ಸಾಧ್ಯಪಡುವು ದಿಲ್ಲವೆಂದು ತಿಳಿಯುತ್ತಿದೆ. ಆ ಕಾಲ ನಿಯಮ ಒಂದು ಯೋಗಿಗಳಿಗೆ ಹೊರತು

ಉಳಿದ ಯಾರಿಗೂ ಅನ್ವಯಿಸುವುದಿಲ್ಲ. ಅದೇ ವಿಷಯವನ್ನು ಭಗವದ್ಗೀತೆಯಲ್ಲಿ, ಅಕ್ಷರ ಪರಬ್ರಹ್ಮ ಯೋಗದಲ್ಲಿ 23ನೇ ಶ್ಲೋಕದಲ್ಲಿ ಹೇಳಿದ್ದಾರೆ.

**ಶ್ಲೋ॥ ಯತ್ರಕಾಲೇ ತ್ವನಾ ವೃತ್ತಿ ಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾನ್ತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ! ॥**

**ಭಾವಾರ್ಥ :–** "ಯೋಗಿಗಳು ಯಾವಾಗ ಮರಣಿಸಿದರೇ ಪುನಃ ಹುಟ್ಟುವುದಿಲ್ಲವೊ, ಯಾವಾಗ ಮರಣಿಸಿದರೇ ಪುನಃ ಜನ್ಮಿಸುತ್ತಾರೋ, ಆ ಕಾಲವನ್ನು ಕುರಿತು ಹೇಳುತ್ತೇನೆ ಕೇಳು". ಈ ಶ್ಲೋಕದಲ್ಲಿ ಯೋಗಿನಃ ಎಂದು ಹೇಳುವುದರಿಂದ, ಇದು ಯೋಗಿಗಳಿಗೆ ಮಾತ್ರವೇ ಎಂದು ತಿಳಿಯುತ್ತಿದೆ. ಯೋಗಿಯಾಗಿರುವವನು ಯಾವಾಗ ಮರಣಿಸಿದರೆ, ದೇವರಲ್ಲಿ ಸೇರಿಹೋಗಿ ಪುನಃ ಜನ್ಮಿಸುವುದಿಲ್ಲವೋ, ಯಾವಾಗ ಮರಣಿಸಿದರೇ ದೇವರಲ್ಲಿ ಐಕ್ಯವಾಗದೇ ಪುನಃ ಜನ್ಮಿಸುತ್ತಾನೊ, ಆ ಎರಡು ಕಾಲಗಳನ್ನು ಕುರಿತು, ಗೀತೆಯಲ್ಲಿ ಭಗವಂತನು ಏನು ಹೇಳುತ್ತಿದ್ದಾನೋ ಪರಿಶೀಲಿಸಿ ನೋಡೋಣ.

**24.ಶ್ಲೋ॥ ಅಗ್ನಿರ್ಜ್ಯೋರ್ತಿ ರಹ ಶುಕ್ಲಷ್ಷಣ್ಮಾಸಾ ಉತ್ತರಾಯಣಮ್ ।**
**ತತ್ರಪ್ರಯಾತಾಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ॥**

**25.ಶ್ಲೋ॥ ಧೂಮೊ ರಾತ್ರಿ ಸ್ತಥಾಕೃಷ್ಣಷ್ಷಣ್ಮಾಷಾ ದಕ್ಷಿಣಾಯನಮ್ ।**
**ತತ್ರ ಚಾಂದ್ರಮಸಂ ಜ್ಯೋತಿರ್ಯೋಗಿ ಪ್ರಾಪ್ಯ ನಿವರ್ತತೇ॥**

**24. ಭಾವಾರ್ಥ :–** ಸೂರ್ಯರಶ್ಮಿ ಇರುವ ಹಗಲಲ್ಲಿ, ಚಂದ್ರನು ಶುಕ್ಲಪಕ್ಷದಲ್ಲಿ ಇರುವಾಗ, ಸೂರ್ಯನು ಉತ್ತರಾಯಣದಲ್ಲಿ ಇರುವಾಗ, ಮರಣಿಸಿದ ಯೋಗಿಗಳು ದೇವರಲ್ಲಿ ಐಕ್ಯವಾಗಿ ಹೋಗಿ ಪುನಃ ಹುಟ್ಟುವುದಿಲ್ಲ.

**25. ಭಾವಾರ್ಥ :–** ಮೇಘ ಆವರಿಸಿ ಇರುವಾಗಾಗಲಿ, ರಾತ್ರಿಸಮಯವಾಗಲಿ, ಚಂದ್ರನು ಕೃಷ್ಣಪಕ್ಷದಲ್ಲಿರುವ ಹದಿನೈದು ದಿನಗಳಲ್ಲಾಗಲಿ, ಸೂರ್ಯನು ದಕ್ಷಿಣಾಯನದಲ್ಲಿರುವ ಆರು ತಿಂಗಳಲ್ಲಾಗಲಿ, ಯೋಗಿ ಮರಣಿಸಿದರೇ ಆತನು ಚಂದ್ರ ತೇಜವನ್ನು ಹೊಂದಿ ಪುನಃ ಹುಟ್ಟುತ್ತಾನೆ.

ಭೂಮಿಮೇಲೆ ಹುಟ್ಟಿದವನು ಯಾರಾದರಾಗಲಿ, ದೇವರಲ್ಲಿ ಐಕ್ಯವಾಗಿ ಹೋಗಿ, ಪುನಃ ಜನ್ಮಗಳು ಹೊಂದದ ಸ್ಥಿತಿಗೆ ಬರುವುದಕ್ಕೆ, ಅವನು ತಪಸ್ಸುಗಳು ಮಾಡುವ ತಪಸ್ವಿ ಆದರೂ, ವೇದಗಳನ್ನು ಓದುವ ವೇದಾಂತಿ ಆದರೂ, ಯಜ್ಞಗಳು ಮಾಡುವವನಾದರೂ, ದಾನಗಳನ್ನು ಮಾಡುವವನಾದರೂ ಅರ್ಹನಲ್ಲ. ದೇವರಲ್ಲಿ ಐಕ್ಯವಾಗಿ ಪುನಃ ಜನ್ಮಿಸದಿರುವುದಕ್ಕೆ ಯೋಗಿ ಮಾತ್ರವೇ ಅರ್ಹನು. ಯೋಗಿ ಆದವನು ಕೂಡಾ ರಾತ್ರಿಸಮಯವೊ, ಮೇಘವಿರುವ ಹಗಲು ಸಮಯವೊ, ಕೃಷ್ಣಪಕ್ಷದಲ್ಲಿಯೊ, ದಕ್ಷಿಣಾಯನದಲ್ಲಿಯೋ ಮರಣಿಸಿ ಪುನಃ ಜನ್ಮಕ್ಕೆ ಹೋಗುತ್ತಿರುತ್ತಾನೆ. ಅದಕ್ಕೆ ಕಾರಣ ಆ ಯೋಗಿಗೆ ಕರ್ಮಗಳು ಪೂರ್ತಿಯಾಗಿ ಮುಗಿದುಹೋಗಲಿಲ್ಲವೆಂದು ಅರ್ಥ. ಕರ್ಮ ಶೇಷವಿರುವ ಯೋಗಿ, ದೇವರಲ್ಲಿ ಐಕ್ಯವಾಗುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಕಾಲ ತಪ್ಪಿಹೋಗಿ, ಜ್ಞಾನ ತೇಜಸ್ಸಿನಿಂದ ಯೋಗಿ ಪುನಃ ಹುಟ್ಟುತ್ತಾನೆ. ನಂತರ ಜನ್ಮದಲ್ಲಿ ಕೂಡಾ ಆತನು ಯೋಗಿಯಾಗಿಯೇ ಇದ್ದು, ಕರ್ಮಗಳೆಲ್ಲವನ್ನು ಸುಟ್ಟುಹಾಕಿ, ದೇವರಲ್ಲಿ ಐಕ್ಯವಾಗುವ ಕಾಲದಲ್ಲಿಯೇ ಮರಣಿಸಿ ಮೋಕ್ಷವನ್ನು ಹೊಂದುತ್ತಾನೆ. ಯೋಗಿ ಆದವನು ಕರ್ಮಶೇಷವನ್ನು ಅನುಸರಿಸಿ, ಎರಡು ಮೂರು ಜನ್ಮಗಳಿಗಾದರೂ, ಕರ್ಮರಹಿತನಾಗಿ, ಸೂರ್ಯರಶ್ಮಿ ಇರುವ ಹಗಲಿನಲ್ಲಿ, ಶುಕ್ಲಪಕ್ಷದಲ್ಲಿ, ಉತ್ತ ರಾಯಣದಲ್ಲಿ ಮರಣಿಸಿ ಮೋಕ್ಷಹೊಂದಿ ದೇವರಲ್ಲಿ ಬೆರೆತುಹೋಗುತ್ತಾನೆ. ಇದು, ಮನುಷ್ಯ ಯೋಗಿಯಾಗಿ ಬದಲಾಗಿ ದೇವರಲ್ಲೈಕ್ಯವಾಗುವ ವಿಧಾನ. ಈ ವಿಧಾನವಲ್ಲದೇ, ಹಗಲು, ಶುಕ್ಲಪಕ್ಷ, ಉತ್ತರಾಯಣವಲ್ಲದೇ, ಯೋಗಿಯಾಗಿ ಬದಲಾಗದೇ ಮೋಕ್ಷವನ್ನು ಹೊಂದುವುದಕ್ಕೆ ಸಾಧ್ಯವಿಲ್ಲ. ಭಾರತಯುದ್ಧದಲ್ಲಿ, ಭೀಷ್ಮನು ಕೃಷ್ಣನನ್ನು ಮೋಕ್ಷವನ್ನು ಪ್ರಸಾದಿಸೆಂದು ಕೋರಿದಾಗ, ಕೃಷ್ಣನು ಉತ್ತರಾಯಣ ಬರುವವರೆಗು ನಿಲ್ಲು ಎಂದಿದ್ದಾನೆ. ಆಗ ಉತ್ತರಾಯಣ ಬರುವುದಕ್ಕೆ ಎಂಟು ದಿನಗಳು ಸಮಯ ಇರುವುದರಿಂದ ಭೀಷ್ಮನು ಎಂಟು ದಿನಗಳು ಹಾಗೆಯೇ ಇದ್ದು, ಎಂಟು ದಿನಗಳ ನಂತರ ಉತ್ತರಾಯಣ ಬಂದ ಕೂಡಲೇ ಹಗಲು, ಶುಕ್ಲಪಕ್ಷದಲ್ಲಿ ಮರಣಿಸುವುದರಿಂದ ದೇವರಲ್ಲಿ ಐಕ್ಯವಾಗಿ ಹೋಗಿದ್ದಾನೆ. ಯೋಗಿಯಲ್ಲದವನು ಸ್ವಾಮಿಯಾಗಲಿ, ತಪಸ್ವಿಯಾಗಲಿ, ಪೀಠಾಧಿಪತಿಯಾಗಲಿ ಮೋಕ್ಷ ಒಂದರ ಕೊನೆಯ ಅಂಚಿಗೆ ಹೋಗುವುದಕ್ಕು

ಕೂಡಾ ಸಾಧ್ಯವಿಲ್ಲ. ಇಂದಿನ ಕಾಲದಲ್ಲಿ, ಗುರು ಉಪದೇಶ ಹೊಂದಿದಷ್ಟು ಮಾತ್ರಕ್ಕೆ ಮೋಕ್ಷ ಹೊಂದಿದ್ದೇವೆನ್ನುವುದು, ಸನ್ಯಾಸತ್ವ ತೆಗೆದುಕೊಳ್ಳುತ್ತಲೇ ಮೋಕ್ಷಕ್ಕೆ ಟಿಕೆಟ್ ದೊರೆತಿದೆನ್ನುವುದು ಸರಿಯಲ್ಲ. ಮೋಕ್ಷ ಸುಲಭವಾಗಿ ದೊರೆಯುವುದಿಲ್ಲ.

ಬ್ರಹ್ಮವಿದ್ಯೆಯಲ್ಲಿ ಮದುವೆ ಎಂದರೇ ದೇವರು ಎಂದು ಅರ್ಥ. ಮದುಮಗಳು ಎಂದರೇ ದೇವರ ಮಗಳು ಎಂದೂ, ಮದುಮಗ ಎಂದರೇ ದೇವರ ಮಗ ಎಂದೂ ಹೇಳಬಹುದು. ದೇವರಲ್ಲಿ ಐಕ್ಯವಾಗಿಹೋದವನನ್ನು ಮದುವೆಯಾಗಿ ಹೋದವನೆಂದು ಕೂಡಾ ಹೇಳಬಹುದು. ದೇವರ ಮದುವೆ ಎಂದರೇ, ದೇವರಲ್ಲಿ ಸೇರಿಹೋದವರೆಲ್ಲರನ್ನು ಮದುವೆಯಾದವರೆಂದು ಹೇಳಬಹುದು. ದೇವರು ಧರ್ಮ ಸಂಸ್ಥಾಪನೆಗಾಗಿ, ಮನುಷ್ಯನಾಗಿ ಭೂಮಿಮೇಲೆ ಹುಟ್ಟಿದಾಗ, ಭಗವಂತನಾಗಿ ಲೆಕ್ಕಿಸಲ್ಪಡುತ್ತದೆ. ಭಗವಂತನೇ ಗುರುವಾಗಿರುತ್ತಾನೆ. ಗುರುವಾಗಿರುವವನು ಯಾವಾಗಲೂ ಕರ್ಮಯೋಗಿಯಾಗಿಯೇ ಇರುತ್ತಾನೆ. ಕರ್ಮಯೋಗಿಯಾದ ಗುರು ಮರಣಿಸಿದಾಗ, ಆತನು ಪುನಃ ಮೊದಲ ಸ್ಥಾನವಾದ ದೇವರಲ್ಲಿಯೇ ಸೇರಿಹೋಗಬೇಕಾಗಿದೆ. ಹಾಗೆ ಯೋಗಿಯಾದ ಗುರುವು ದೇವರಲ್ಲಿ ಸೇರುವುದಕ್ಕೆ ಅವಸಾನದಶೆಯಲ್ಲಿ ಯಾವ ಯೋಗಿ ಆದರೂ ದೇವರಲ್ಲಿ ಸೇರುವುದಕ್ಕೆ ನಿರ್ಣಯಿಸಲ್ಪಟ್ಟ ಪ್ರತ್ಯೇಕವಾದ ಕಾಲದಲ್ಲಿಯೇ, ಮರಣಿಸಬೇಕಾ ಎಂದು ಕೆಲವರಿಗೆ ಪ್ರಶ್ನೆ ಬರುತ್ತದೆ. ಮನುಷ್ಯನಾದವನು ಯಾರಾದರೂ, ಅವನು ದೇವರಲ್ಲಿ ಐಕ್ಯವಾಗುವುದಕ್ಕೆ ಕಾಲ ನಿಯಮವಿರುವಾಗ, ಆ ನಿಯಮ ಮನುಷ್ಯನಾಗಿ ಹುಟ್ಟಿದ ಭಗವಂತನಿಗೂ ಸಹ ಅನ್ವಯಿಸುತ್ತದೆ ಅಲ್ಲವೆ! ಎಂದು ಅಂದುಕೊಂಡರೇ ನಾವು ಕೆಸರಿನಲ್ಲಿ ಕಾಲುಹಾಕಿದಂತಾಗುತ್ತದೆ. ಮದುವೆ ಆಗದವನಿಗೆ ತಾಳಿ ಅಗತ್ಯ, ಮೇಳವೂ ಅಗತ್ಯ. ಮದುವೆ ಆದವನಿಗೆ ಮತ್ತೆ ಮದುವೆ ಅವಶ್ಯವಿಲ್ಲ ಅಲ್ಲವೆ! ಹಾಗೆಯೇ ಒಂದು ಬಾರಿ ದೇವರಾದವನು ಪುನಃ ದೇವರು ಆಗಬೇಕಾದ ಅವಶ್ಯವಿಲ್ಲ. ದೇವರು ಭೂಮಿಮೇಲೆಗೆ ಸಾಧಾರಣ ಮನುಷ್ಯನಾಗಿ ಬಂದರೂ, ಆತನನ್ನು ಭಗವಂತನು ಎಂದೂ, ಗುರುವು ಎಂದೂ ಹೇಳಬಹುದು. ಭಗವಂತನೆಂದರೇ ಮಾನವ ರೂಪದಲ್ಲಿರುವ ದೇವರೆಂದು ಅರ್ಥ. ಹಾಗೆಯೇ ಗುರುವು ಎಂದರೂ ಮನುಷ್ಯನಾಗಿರುವ ದೇವರೆಂದೇ ಹೇಳಬಹುದು. ದೇವರು ದೇವರಾಗಿಯೇ ಇರುವಾಗ, ಪುನಃ ದೇವರಾಗಿ

ಬದಲಾಗುವನೆನ್ನುವುದರಲ್ಲಿ ಅರ್ಥವಿಲ್ಲ. ಸಾಧಾರಣ ಮನುಷ್ಯರಿಗೆ ದೇವರು ಹೇಳಿದ ಸೂತ್ರ ಕಾಲ ನಿಯಮ. ದೇವರು ಮನುಷ್ಯರಿಗೆ ಹೇಳಿದ ಸೂತ್ರವನ್ನು, ಮನುಷ್ಯರು ದೇವರ ಮೇಲೆ ಪ್ರಯೋಗಿಸಬಾರದು. ಮದುವೆಯಾಗದವನಿಗೆ ಹೇಳಿದ ಸೂತ್ರವನ್ನು ಮದುವೆಯಾದವನಿಗೆ ಉಪಯೋಗಿಸಬಾರದು. ಆದ್ದರಿಂದ ನಮ್ಮ ಹಿರಿಯರು "ಮುಗಿದುಹೋದ ಮದುವೆಗೆ ಮೇಳವೇಕೆ" ಎನ್ನುವ ಗಾದೆಮಾತನ್ನು ಉಪಯೋಗಿಸಿ, ದೇವರೊಳಗೆ ಐಕ್ಯವಾದವನಿಗೆ ಕಾಲ ನಿಯಮ ಏತಕ್ಕೆ ಎಂದು ಹೇಳಿದ್ದಾರೆ.

## 24. ನನ್ನ ಪಾತಿವ್ರತ್ಯ, ನನ್ನ ಮೊದಲ ಗಂಡನಿಗೆ ತಿಳಿದಿದೆ

ಪತಿವ್ರತೆ ಎಂದರೆ ಪತಿಯೇ ವ್ರತವಾಗಿ ಇರುವುದು ಎಂದು ಅರ್ಥ. ಒಂದು ವಿಧವಾಗಿ ಹೇಳಿಕೊಂಡರೇ ಪತಿಮೇಲೆ ದೃಷ್ಠಿ ಹೊರತು, ಪಕ್ಕದ ದೃಷ್ಠಿ ಇಲ್ಲದವಳೆಂದು ಹೇಳಬಹುದು. ಪತಿ ಎಂದರೆ ಗಂಡ ಎಂದು ಅರ್ಥ. ಒಂದೇ ಗಂಡನ ಸಾಂಗತ್ಯ ಹೊರತು, ಇತರೆ ಪುರಷರ ಸಾಂಗತ್ಯವಿಲ್ಲದ ಸ್ತ್ರೀಯನ್ನು ಪತಿವ್ರತೆ ಎಂದು ಕರೆಯುತ್ತಿದ್ದಾರೆ. ಒಬ್ಬ ಸ್ತ್ರೀಗೆ ಇಬ್ಬರು ಗಂಡಂದಿರಿರುವಾಗ, ಆಕೆಯನ್ನು ಪತಿವ್ರತೆ ಎನ್ನುವುದಕ್ಕೆ ಅವಕಾಶವಿಲ್ಲ. ಮೇಲಿನ ಗಾದೆಯಲ್ಲಿ ನನ್ನ ಪಾತಿವ್ರತ್ಯ ನನ್ನ ಮೊದಲ ಗಂಡನಿಗೆ ತಿಳಿದಿದೆ ಎಂದಾಗ ಎರಡನೆ ಗಂಡ ಆಕೆಗೆ ಇದ್ದಾನೆಂದು ಹೇಳದೆಯೇ ತಿಳಿಯುತ್ತಿದೆ. ಎರಡನೆ ಗಂಡ ಇರುವಾಗ ಆಕೆ ಪತಿವ್ರತೆಯಾ ಅಲ್ಲವಾ ಎಂದು, ಮೊದಲ ಗಂಡನನ್ನು ಕೇಳಬೇಕಾದ ಕೆಲಸವೇ ಇರುವುದಿಲ್ಲ. ಹಾಗಿರುವಾಗ ಈ ಗಾದೆಯನ್ನು ಕೇಳಿದವರ್‍ಯಾರಾದರೂ, ಕಾಣಿಸುತ್ತಿದ್ದರೇ ಇಣುಕಿ ನೋಡಬೇಕಾದ ಅವಶ್ಯವಿಲ್ಲ ಎನ್ನುವಂತೆ, ಎರಡನೆ ಗಂಡ ಇರುವ ಆಕೆ ಪತಿವ್ರತೆ ಅಲ್ಲವೆಂದು ತಿಳಿದುಹೋಗುತ್ತಿದೆಯೆಂದು ಹೇಳಬಲ್ಲರು. ಹಾಗಿರುವಾಗ ಈ ಗಾದೆಯನ್ನು ಹೇಳಬೇಕಾದ ಅವಶ್ಯವೇನು ಬಂದಿದೆಯೆಂದು ನೋಡಿದರೆ, ಎಲ್ಲರಿಗೂ ತಿಳಿಯದ ವಿವರ ನಮಗೆ ಸ್ವಲ್ಪ ಅರ್ಥವಾಗಬಲ್ಲದು.

ಜಗತಿಗೆಲ್ಲಾ ದೇವರು ಪತಿಯಾಗಿರುವಾಗ, ದೇವರನ್ನು ಜಗತ್‌ಪತಿ ಎಂದು ಹೇಳಿದಾಗ, ಹುಟ್ಟಿನಿಂದಲೇ ದೇವರು ಎಲ್ಲರಿಗೂ ಪತಿಯಾಗಿ ಇದ್ದಾನೆ.

ಒಬ್ಬ ಸ್ತ್ರೀಗೆ ಹುಟ್ಟಿನಿಂದಲೇ ದೇವರು ಗಂಡನಾದಾಗ, ಯುಕ್ತವಯಸ್ಸಿನಲ್ಲಿ ವಿವಾಹವಾದಾಗ ಬಂದವನು ಎರಡನೆ ಪತಿ ಆಗುತ್ತಾನೆ. ಒಬ್ಬ ಸ್ತ್ರೀಗೆ ಮೊದಲ ಪತಿ ಇದ್ದಾನೆಂದು ತಿಳಿದರೂ ತಿಳಿಯದೆ ಹೋದರೂ ಅಕೆಗೆ ಪತಿ ಇದ್ದಂತೇ ನಾವು ಲೆಕ್ಕಿಸಿಕೊಳ್ಳಬೇಕು. ಆಕೆ ತನ್ನ ಎರಡನೆ ಗಂಡನನ್ನು ಗುರುತಿಸಿ ಆತನಿಗೆ ಸಂಸಾರ ಮಾಡಿದರೂ, ಮನಸ್ಸಿನಲ್ಲಿ ಮೊದಲ ಗಂಡನನ್ನು ಕುರಿತು ಯೋಚಿಸದಿರುವುದರಿಂದ ಆಕೆಯನ್ನು ಜಾರಿಣಿಯ ಕೆಳಗೆ ಜಮಕಟ್ಟಬಹುದು. ಹುಟ್ಟಿನಿಂದಲೇ ಪತಿಯಾಗಿರುವ ದೇವರನ್ನು ವಿಸ್ಮರಿಸಿ, ಶರೀರ ಗಂಡನೊಂದಿಗೆ ಸಂಸಾರ ಮಾಡುತ್ತಾ, ಶರೀರ ಗಂಡನೊಂದರ ಮಾತುಗಳನ್ನು ಕೇಳಿ, ಮಾನಸಿಕ ಗಂಡನಾದ ದೇವರನ್ನು ಕಡಿಮೆಯಾಗಿ ನೋಡಿದ ಸ್ತ್ರೀ, ಮೊದಲ ಗಂಡನಿಗೆ ಮೋಸಮಾಡಿದ ಸ್ತ್ರೀ ಆಗುತ್ತಾಳೆ. ಯಾವ ವಿಷಯದಲ್ಲಾದರೂ ಎರಡನೆ ಗಂಡನ ಮಾತು ಕೇಳಿದರೂ ಫರವಾಗಿಲ್ಲ. ಆದರೆ ಮೊದಲ ಪತಿಯಾದ ದೇವರ ವಿಷಯದಲ್ಲಿ, ಶರೀರ ಪತಿ ಹೇಳಿದಹಾಗೆ ಕೇಳದಂತೆ, ಮೊದಲ ಪತಿಯ ಹತ್ತಿರ ಹೇಗೆ ಇರಬೇಕೋ ಹಾಗಿದ್ದು ಸ್ತ್ರೀ ನಿಜವಾದ ಪತಿವ್ರತೆ ಯಾಗುತ್ತಾಳೆ. ಒಬ್ಬ ಸ್ತ್ರೀಗೆ ಇರುವ ಇಬ್ಬರು ಪತಿಯರಲ್ಲಿ, ಮೊದಲ ಪತಿಯೇ ನಿಜವಾದ ಪತಿ ಆಗುತ್ತಾನೆ. ಎರಡನೆ ಪತಿ ನಿಜವಾದ ಪತಿ ಅಲ್ಲ. ಏಕೆಂದರೆ ಆತನಿಗೂ ಸಹ ಪತಿ ಇದ್ದಾನೆ. ತನಗೆ ಪತಿ ಇರುವ ವ್ಯಕ್ತಿ, ಇನ್ನೊಬ್ಬರಿಗೆ ಪತಿ ಹೇಗೆ ಆಗುತ್ತಾನೆ. ಆತನು ಪತಿ ಎಂದು ಹೇಳಲ್ಪಟ್ಟರೂ, ವಾಸ್ತವಕ್ಕೆ ಎಲ್ಲರಿಗೂ ಮೊದಲನೆಯವನೇ ಪತಿ. ಮೊದಲ ಪತಿಯ ಬಳಿ ವಿಶ್ವಾಸದಿಂದ ನಡೆದುಕೊಳ್ಳುವ ಹೆಂಡತಿ ಎಂತಹವಳೆಂದು ಮೊದಲ ಪತಿಗೇ ತಿಳಿದಿದೆ. ಆದ್ದರಿಂದ ಈ ಗಾದೆಯಲ್ಲಿ "ನನ್ನ ಪಾತಿವ್ರತ್ಯ ನನ್ನ ಮೊದಲ ಪತಿಗೆ ತಿಳಿದಿದೆ" ಎಂದು ಹೇಳಿದ್ದಾರೆ.

## 25. ಭೂತಗಳಿಗೆ ಬುದ್ಧಿ ಇಲ್ಲ, ನರರಿಗೆ ಬದ್ಧವಿಲ್ಲ

ವಿಶ್ವವನ್ನು ದೇವರು ಸೃಷ್ಟಿಸಿದಾಗಲೇ ತನ್ನ ಪರಿಪಾಲನೆಯನ್ನು ಕೂಡ ತಯಾರಿಸಿದ್ದಾನೆ. ಅದರಿಂದ ದೇವರು ಸೃಷ್ಟಿಸಿದ ವಿಶ್ವ, ಪಾಲಿಸುವವರೂ, ಪಾಲಿಸಲ್ಪಡುವವರು ಎನ್ನುವ ಎರಡು ವಿಧಗಳ ಜೀವರಾಶಿಗಳೊಂದಿಗೆ ತುಂಬಿಹೋಗಿದೆ. ಪಾಲಿಸಲ್ಪಡುವವರು ನಮಗೆ ಪ್ರತ್ಯಕ್ಷವಾಗಿ ಕಾಣಿಸುವ

ಜೀವರಾಶಿಗಳಾಗಿ ಇರುವಾಗ, ಪಾಲಿಸುವವರು ಕಾಣಿಸದ ಗ್ರಹಗಳು, ಉಪಗ್ರಹಗಳಾಗಿ ಮತ್ತು ಭೂತಗಳೂ, ಉಪಭೂತಗಳಾಗಿ ಇದ್ದಾರೆ. ಪಾಲಿ ಸಲ್ಪಡುವ ಜೀವರಾಶಿಗಳು ಅಂಡಜ, ಪಿಂಡಜ, ಉದ್ಭಿಜಗಳಾಗಿ ಇವೆ. ಭೂಮಂಡಲದಲ್ಲಿ ಎಷ್ಟೋ ಕೋಟಿ ಜೀವರಾಶಿಗಳಿರುವಾಗ, ಅವುಗಳನ್ನು ಪಾಲಿಸುವ ಗ್ರಹಗಳು, ಭೂತಗಳೂ ಕೋಟಿ ಸಂಖ್ಯೆಯಲ್ಲಿ ಇವೆ. ಜೀವರಾಶಿಗಳನ್ನು ನಡೆಸಿ, ಅನುಭವಿಸುವಂತೆ ಮಾಡುವುದಕ್ಕೆ ಕಾರಣವಾದ ಕರ್ಮವಿದೆ. ಹೊರಗಿನ ಪ್ರಪಂಚದಲ್ಲಿ ಕೆಲವು ಕರ್ಮಗಳನ್ನು ಜೀವಿಯು ಅನುಭವಿಸುವುದಕ್ಕೆ, ಕಾಣಿಸದಂತೆ ಕೆಲವು ಕಾರ್ಯಗಳನ್ನು ಮಾಡಿ, ಆ ಕಾರ್ಯಗಳಿಂದ ಜೀವಿಗಳನ್ನು ಅನುಭವಿಸುವಂತೆ ಮಾಡುವಹಾಗೆ, ಗ್ರಹಗಳು, ಭೂತಗಳು ಮಾಡುತ್ತಿರುವವು. ಕರ್ಮವನ್ನು ಅನುಭವಿಸುವ ಜೀವಿಗಳೆಲ್ಲವೂ ಮಾಯೆ ಮಾತೆ ಅಧೀನದಲ್ಲಿರು ವಾಗ, ಅನುಭವಿಸುವಂತೆ ಮಾಡುವ ಗ್ರಹ, ಭೂತ ಜೀವಿಗಳೆಲ್ಲವೂ ಪ್ರಕೃತಿ ಅಧೀನದಲ್ಲಿರುತ್ತವೆ. ಪ್ರಕೃತಿಯೆಲ್ಲವೂ, ದೇವರ ಅಧೀನದಲ್ಲಿರುತ್ತವೆ.

ಮನುಷ್ಯರಿಗೆ ಮನಸ್ಸು, ಬುದ್ಧಿ, ಚಿತ್ತ, ಅಹಮ್ ಎನ್ನುವ ನಾಲ್ಕು ಭಾಗಗಳು ಶರೀರದಲ್ಲಿರುತ್ತವೆ. ಮುಖ್ಯವಾಗಿ ಈ ನಾಲ್ಕು ಅಂತಃಕರಣಗಳು ಮನುಷ್ಯನನ್ನು ಪೂರ್ತಿಯಾಗಿ ತಪ್ಪುದಾರಿ ಹಿಡಿಸುತ್ತಿವೆ. ಆದ್ದರಿಂದ ದೇವರ ಜ್ಞಾನಕ್ಕೆ ಬದ್ಧನಾಗಿ ಬದುಕುತ್ತಿಲ್ಲ. ಶರೀರದಲ್ಲಿ ಈ ನಾಲ್ಕು ಅಂತಃಕರಣಗಳು ಕೆಲಸಮಾಡುವುದರಿಂದ, ಮನುಷ್ಯ ದೇವರ ಜ್ಞಾನಕ್ಕೆ ಬದ್ಧನಾಗಿ ಆಗಲಿ, ಹಿರಿಯರ ಮಾತಿಗೆ ಬದ್ಧನಾಗಿ ಆಗಲಿ, ಧರ್ಮಗಳಿಗೆ ಬದ್ಧನಾಗಿ ಆಗಲಿ ಇರುತ್ತಿಲ್ಲ. ಆದ್ದರಿಂದ ಮನುಷ್ಯ ಜ್ಞಾನ ಬದ್ಧನಲ್ಲ ಎನ್ನುವ ಮಾತು ಎಲ್ಲರಿಗೂ ತಿಳಿದು ಹೋಗಿದೆ. ಎಲ್ಲಾದರೂ ಅಪರೂಪವಾಗಿ ಸಾವಿರಕ್ಕೊಬ್ಬನು, ಜ್ಞಾನ ಧರ್ಮಬದ್ಧನಾಗಿ ಇದ್ದರೆ ಅವನನ್ನು ಹೇಳನವಾಗಿ ಮಾತನಾಡುವವರು 999 ಮಂದಿ ಇರುತ್ತಾರೆ. ಮನುಷ್ಯ ಮಾಯಬದ್ಧನಾಗಿ, ಜ್ಞಾನ ಬದ್ಧನಾಗದೆ ಹೋಗಿದ್ದಾನೆ. ಆದ್ದರಿಂದ ಮನುಷ್ಯನನ್ನು ಬದ್ಧ ಇಲ್ಲದವನು ಎಂದು ನಮ್ಮ ಹಿರಿಯರು ಹೇಳಿದ್ದಾರೆ. ಮಾನವಜಾತಿ ಎಲ್ಲವೂ ಉಳಿದ ಜೀವರಾಶಿಗಳಿಗಿಂತ ಹೆಚ್ಚಿನ ಅಜ್ಞಾನ ಮಾರ್ಗದಲ್ಲಿ ಹೊತುಕೊಂಡು ಹೋಗಿದೆ. ಹಾಗೆ ಇರುವುದರಿಂದ ಪಾಲಿಸಲ್ಪಡುವ ಜೀವಿಗಳಲ್ಲಿ, ಮಾನವನು ಮಾತ್ರವೇ ಜ್ಞಾನಬದ್ಧ ಇಲ್ಲದವನಾಗಿ

ಹೋಗಿ ಮೇಲ್ನೋಟಕ್ಕೆ ಕಾಣಿಸುತ್ತಿದ್ದಾನೆ. ದೇವರ ಪರಿಪಾಲನೆ ಭಾಗದಲ್ಲಿನ ಭೂತಗಳು ಮತ್ತು ಗ್ರಹಗಳು, ಹೆಚ್ಚಾಗಿ ಮಾನವನ ಮೇಲೆ ದೃಷ್ಟಿಯನ್ನಿಟ್ಟಿವೆ.

ಪರಿಪಾಲನೆ ಎಂದರೆ ಶಿಕ್ಷೆಗಳು ವಿಧಿಸುವುದಕ್ಕೇ ನೆಲೆಗೊಳಿಸಿರುವುದೆಂದು ಅರ್ಥ. ಯಾರಾದರೇ ಒಂದು ಬದ್ಧತೆ ಇಲ್ಲದಂತೆ ತಮ್ಮ ಇಷ್ಟ ಬಂದಹಾಗೆ ನಡೆದುಕೊಳ್ಳುತ್ತಾ, ರಾಜನನ್ನೇ ಧಿಕ್ಕರಿಸುವ ಸ್ವಭಾವನ್ನು ಹೊಂದಿರುತ್ತಾರೋ, ಆಗ ರಾಜ್ಯಾಂಗ ಕಾನೂನು ಅವರ ಮೇಲೆ ಚರ್ಯೆ ತೆಗೆದುಕೊಳ್ಳುತ್ತದೆ. ರಾಜ್ಯಾಂಗ ಕಾನೂನಿನಲ್ಲಿ ಇಂತಹ ತಪ್ಪಿಗೆ ಇಂತಹ ಶಿಕ್ಷೆಯೆಂದು ಮೊದಲೇ ನಿರ್ಣಯಿಸಲ್ಪಟ್ಟಿರುತ್ತದೆ. ಆದ್ದರಿಂದ ಪಾಲಿಸುವವರು ಶಿಕ್ಷಿಸುವವರೇ ಹೊರತು, ಶಿಕ್ಷೆ ವಿಷಯದಲ್ಲಿ ನಿರ್ಣಯವನ್ನು ತೆಗೆದುಕೊಳ್ಳುವವರಲ್ಲ. ತಪ್ಪುಗಳಿಗೆ ಶಿಕ್ಷೆಗಳು ಮೊದಲೇ ನಿರ್ಣಯಿಸಲ್ಪಟ್ಟಿರುವುದರಿಂದ, ಮನುಷ್ಯರನ್ನು ಪಾಲಿಸುವ ಭೂತಗಳು, ಗ್ರಹಗಳು ಶಿಕ್ಷೆಗಳ ವಿಷಯದಲ್ಲಿ ಯೋಚಿಸಬೇಕಾದ ಕೆಲಸವಿಲ್ಲ. ನಿರ್ಣಯಿಸಲ್ಪಟ್ಟಿರುವ ಶಿಕ್ಷೆಗಳನ್ನು ಜಾರಿ ಮಾಡಿ, ಶಿಕ್ಷಿಸುವುದೇ ತಮ್ಮ ಕೆಲಸವಾಗಿಟ್ಟಿಕೊಂಡಿರುತ್ತಾರೆ. ದೇವರ ಪರಿಪಾಲನೆ ವಿಭಾಗದಲ್ಲಿನ ಭೂತಗಳಿಗು, ಗ್ರಹಗಳಿಗೂ ಪಾಲಿಸಲ್ಪಡುವ ಮಾನವರಿಗೆ ಇರುವಂತೆ ಮನಸ್ಸು, ಬುದ್ಧಿ, ಚಿತ್ತ, ಅಹಮ್ ಇರುವುದಿಲ್ಲ. ಅವರಿಗೆ ಕರ್ಮ ಇರುವುದಾಗಲೀ, ಕರ್ಮ ಬರುವುದಾಗಲೀ, ಕರ್ಮ ಮುಗಿದುಹೋಗುವುದಾಗಲೀ ಇರುವುದಿಲ್ಲ. ಮನುಷ್ಯ ಕರ್ಮ ಪ್ರಕಾರವೇ ಆಡುತ್ತಾ, ಕರ್ಮ ಪ್ರಕಾರವೇ ಅನುಭವಿಸುತ್ತಿದ್ದಾನೆ. ಆದರೇ ಭೂತಗಳು, ಗ್ರಹಗಳು ಪರಮಾತ್ಮ ನೆಲೆಗೊಳಿಸಿದ ಪ್ರಕೃತಿ ಕಾನೂನಿನ ಪ್ರಕಾರ ನಡೆಯುತ್ತಿವೆ. ಪ್ರಕೃತಿ ತೋರಿಸಿದ ದೇವರ ಆಜ್ಞೆಗಳ ಪ್ರಕಾರ ಪಾಲನೆ ಸಾಗಿಸುತ್ತಿವೆ.

ಭೂಮಿಮೇಲೆ ಜೀವರಾಶಿಗಳಾದವರು ಮನುಷ್ಯರೇ ಅಲ್ಲದೆ ದೇವತೆಗಳು ಸಹ ಇದ್ದಾರೆ. ದೇವತೆಗಳಾಗಲಿ, ಋಷಿಗಳಾಗಲೀ, ರಾಜನಾಗಲೀ ಯಾರಾದರಾಗಲೀ ಜೀವರಾಶಿಯಾದವರೆಲ್ಲರನ್ನೂ ಶಿಕ್ಷಿಸುವ ಅಧಿಕಾರ ಭೂತಗಳಿಗೆ, ಗ್ರಹಗಳಿಗೆ ಇವೆ. ಇವರು ಯಾರು ಎನ್ನುವ ವಿಚಕ್ಷಣೆ, ಗ್ರಹಗಳಿಗು, ಭೂತಗಳಿಗೂ ಇರುವುದಿಲ್ಲ. ಅವರು ಯಾರನ್ನು ಕುರಿತು ಆಲೋಚಿಸುವುದಿಲ್ಲ. ಏಕೆಂದರೆ ಪರಿಪಾಲನಾ ವಿಭಾಗದಲ್ಲಿರುವ ಭೂತಗಳಿಗು, ಗ್ರಹಗಳಿಗೂ ಬುದ್ಧಿ ಇರುವುದಿಲ್ಲ.

ಅಹಮ್ ಇರುವುದಿಲ್ಲ. ಉಳಿದ ಅಂತಃಕರಣಗಳು ಯಾವುವು ಇರುವುದಿಲ್ಲ. ಆದ್ದರಿಂದ ಸಂಪೂರ್ಣಜ್ಞಾನ ತಿಳಿದ ನಮ್ಮ ಹಿರಿಯರು, ಗಾದೆಮಾತಾಗಿ "ಭೂತಗಳಿಗೆ ಬುದ್ಧಿ ಇಲ್ಲ, ನರರಿಗೆ ಬದ್ಧವಿಲ್ಲ" ಎಂದು ಹೇಳಿದ್ದಾರೆ. ಇಂದಿನ ಕಾಲದಲ್ಲಿ ಹಣ ಸಂಪಾದನೆಯ ಕಡೆ ಹೊರತು ಪಕ್ಕಕ್ಕೆ ನೋಡದ ಮನುಷ್ಯನನ್ನು, ಪ್ರಯಾಣದಲ್ಲಿಯೂ, ಕೆಲಸಗಳಲ್ಲಿಯೂ ಭೂತಗಳು ಗ್ರಹಗಳು ಅಪಘಾತಗಳ ರೂಪದಲ್ಲಿ ಘೋರವಾಗಿ ಶಿಕ್ಷಿಸುತ್ತಿವೆ. ಅಷ್ಟೇ ಅಲ್ಲದೆ ರೋಗಗಳ ರೂಪದಲ್ಲಿ ಕಠಿನಾತಿ ಕಠಿನವಾಗಿ ಶಿಕ್ಷಿಸುತ್ತಿವೆ. ಎಷ್ಟೋ ಊಹಿಸದ ವಿಧಾನಗಳಲ್ಲಿ ಶಿಕ್ಷಿಸುತ್ತಿವೆ. ಭೂತಗಳು ವಿಧಿಸುವ ಎಲ್ಲ ಶಿಕ್ಷೆಗಳನ್ನು ಅನುಭವಿಸುತ್ತಿರುವ ಮನುಷ್ಯ, ತನ್ನ ಶಿಕ್ಷೆಗಳ ಹಿಂದೆ ಯಾವ ಶಕ್ತಿಗಳು ಕೆಲಸ ಮಾಡುತ್ತಿವೆಯೆಂದು ಸ್ವಲ್ಪವಾದರೂ ಆಲೋಚಿಸುತ್ತಿಲ್ಲ. ಹೀಗೆ ಬದ್ಧವಿಲ್ಲದ ನರನನ್ನು ಬುದ್ಧಿ ಇಲ್ಲದ ಭೂತಗಳು, ಗ್ರಹಗಳು ಶಿಕ್ಷಿಸುತ್ತಿವೆಯೆಂದು ಇಂದಿಗಾದರೂ ತಿಳಿದುಕೊಳ್ಳಿ.

## 26. ಮದ್ವರಿಗೆ ಭುಕ್ತಿ, ವೈಷ್ಣವರಿಗೆ ಭಕ್ತಿ, ಅದ್ವೈತರಿಗೆ ಯುಕ್ತಿ, ತ್ರೈತರಿಗೆ ಶಕ್ತಿ

ಈ ಗಾದೆಮಾತನ್ನು ಗಾದೆಗಳ ಗ್ರಂಥದಿಂದ ತೆಗೆದುಕೊಂಡಿದ್ದೇವೆ. ಆದರೆ ಈ ಗಾದೆ ಕೊನೆಯಲ್ಲಿ ತ್ರೈತರಿಗೆ ಶಕ್ತಿ ಎನ್ನುವ ಪದವನ್ನು ನಾವು ಸೇರಿಸಿದ್ದೇವೆ. ಗಾದೆಗಳ ಗ್ರಂಥದಲ್ಲಿ ಅದ್ವೈತರಿಗೆ ಯುಕ್ತಿ, ಎನ್ನುವವರೆಗೇ ಇದೆಯೆಂದು ತಿಳಿಸುತ್ತಿದ್ದೇವೆ. ಗ್ರಂಥದಲ್ಲಿರುವ ಗಾದೆ "ಮದ್ವರಿಗೆ ಭುಕ್ತಿ, ವೈಷ್ಣವರಿಗೆ ಭಕ್ತಿ, ಅದ್ವೈತರಿಗೆ ಯುಕ್ತಿ" ಎಂದು ಇದೆ. ಈ ಮೂರೂ, ಆಧ್ಯಾತ್ಮಿಕ ವಿದ್ಯೆಯಲ್ಲಿ ಸಿದ್ಧಾಂತಗಳಾಗಿ ಇವೆ. ಆಧ್ಯಾತ್ಮಿಕದಲ್ಲಿ ಮುಖ್ಯವಾಗಿ ಇರಬೇಕಾಗಿರುವುದು ಶಕ್ತಿ. ಆದರೇ ಈ ಗಾದೆ ಮಾತನ್ನು ಬರೆದವರು ಭುಕ್ತಿ, ಭಕ್ತಿ, ಯುಕ್ತಿವರೆಗು ಬರೆದಿಟ್ಟಿದ್ದಾರೆ. ಒಂದು ವಿಧವಾಗಿ ಮುಂಬರುವ ನಾಲ್ಕನೆಯ ಸಿದ್ಧಾಂತಕ್ಕಾಗಿ "ಶಕ್ತಿ" ಪದವನ್ನು ಬಿಟ್ಟುಹಾಕಿದ್ದಾರೇನೋ ಎನಿಸುತ್ತಿದೆ. ಆದ್ದರಿಂದ ಈಗ ಈ ಗಾದೆಮಾತಿಗೆ "ತ್ರೈತರಿಗೆ ಶಕ್ತಿ" ಎನ್ನುವ ವಾಕ್ಯವನ್ನು ನಾವು ಜೋಡಿಸಿದ್ದೇವೆಂದು ಎಲ್ಲರಿಗೂ ತಿಳಿಸುತ್ತಿದ್ದೇವೆ. ಅಷ್ಟೇ ಅಲ್ಲದೆ ಇನ್ನೂ ಇಲ್ಲಿ ತಿಳಿಸುವ ವಾಸ್ತವ ವಿಷಯ ಒಂದಿದೆ, ಅದೇನೆಂದರೇ!

ಆಧ್ಯಾತ್ಮಿಕ ವಿದ್ಯೆಯಲ್ಲಿ ಸ್ಥೂಲ, ಸೂಕ್ಷ್ಮಗಳೆರಡು ಇರುತ್ತವೆ. ಎರಡನ್ನು ತಿಳಿದವನೇ ಆಧ್ಯಾತ್ಮಿಕ ತಜ್ಞ ಆಗುತ್ತಾನೆ. ಸ್ಥೂಲ, ಸೂಕ್ಷ್ಮಗಳನ್ನು ತಿಳಿಯದವನು ಎಷ್ಟು ದೊಡ್ಡದಾಗಿ ಕರೆಯಲ್ಪಡುತ್ತಿದ್ದರೂ, ಬ್ರಹ್ಮರ್ಷಿ ಎಂದು ಹೆಸರು ಇಟ್ಟುಕೊಂಡರೂ ಆತನು ಮಾತ್ರ ಬೇವರ್ಷಿಯೇ ಆಗುತ್ತಾನೆ. ಹಾಗೆಯೇ ಭಗವಾನ್ ಎನ್ನುವ ಪದವನ್ನು ತನ್ನ ಹೆಸರಿನ ಮೊದಲಿಗೆ ಇಟ್ಟುಕೊಂಡರೂ ಆತನು ಮಾತ್ರ ಸೈತಾನ್ ಆಗಿಯೇ ಲೆಕ್ಕಿಸಲ್ಪಡುತ್ತಾನೆ. ಮನುಷ್ಯನ ಸಾಮರ್ಥ್ಯವನ್ನು ಗುರುತಿಸುವ ಜ್ಞಾನ, ಸ್ಥೂಲ, ಸೂಕ್ಷ್ಮಗಳ ಜ್ಞಾನ. ಆದ್ದರಿಂದ ಪ್ರತಿ ಆಧ್ಯಾತ್ಮಿಕತಜ್ಞ ಸ್ಥೂಲವನ್ನು ತಿಳಿದಂತೆ, ಸೂಕ್ಷ್ಮವನ್ನು ತಿಳಿದಿರಬೇಕು. ಮನುಷ್ಯನ ಶರೀರ ಸ್ಥೂಲ. ಮನುಷ್ಯ ಶರೀರದಲ್ಲಿನ ಜೀವಿಯು, ಮನಸ್ಸು, ಬುದ್ಧಿ, ಚಿತ್ತ, ಅಹಂ ಸೂಕ್ಷ್ಮ. ಒಬ್ಬ ಮನುಷ್ಯನಲ್ಲಿ ಮುಖ್ಯಪಾತ್ರ ಪೋಷಿಸುವವು ಮನಸ್ಸು, ಬುದ್ಧಿ, ಅಹಂ. ಸ್ಥೂಲ ಶರೀರ ಎಲ್ಲರಿಗೂ ಒಂದೇ ಪಾತ್ರ ಪೋಷಿಸುತ್ತಿದೆ. ಆದರೆ ಒಬ್ಬೊಬ್ಬನ ಬುದ್ಧಿ ಒಂದೊಂದು ವಿಧವಾಗಿ ಪ್ರತ್ಯೇಕತೆ ಹೊಂದಿದೆ. ಆದ್ದರಿಂದ ಸ್ಥೂಲ ಶರೀರಕ್ಕಿಂತ, ಸೂಕ್ಷ್ಮ ಶರೀರವೇ ಮುಖ್ಯವೆಂದು ತಿಳಿಯುತ್ತಿದೆ. ಶರೀರವು ಒಂಭತ್ತು ರಂಧ್ರಗಳಿರುವ ಹುತ್ತದಂತಾದ್ದು. ಹುತ್ತದಲ್ಲಿ ನಿವಾಸಿಸುವ ಹಾವಿನಂತ ಹವನು ಜೀವಾತ್ಮ. ಜೀವಿಯು ಸಂಪಾದಿಸಿಕೊಂಡ ಜ್ಞಾನವನ್ನು, ಮಾಡಿಕೊಂಡ ಯೋಗವನ್ನು ಅನುಸರಿಸಿ ಆತನಿಗೆ ಜ್ಞಾನಶಕ್ತಿ ಇರುತ್ತದೆ. ಜ್ಞಾನಶಕ್ತಿಯನ್ನೇ ಜ್ಞಾನಾಗ್ನಿಯೆಂದು ಭಗವದ್ಗೀತೆಯಲ್ಲಿ ಕೂಡಾ ಹೇಳಿದ್ದಾರೆ. ಜ್ಞಾನಾಗ್ನಿ ಸೂಕ್ಷ್ಮವಾದುದು. ಅದು ಯಾರಿಗೂ ಕಾಣಿಸುವುದಿಲ್ಲ. ಅದಕ್ಕೆ ಕರ್ಮಗಳನ್ನು ಸುಡುವ ವಿಧಾನವಿದೆ. ಆದ್ದರಿಂದ ಅನುಭವಿಸುವ ಕರ್ಮ ಸುಟ್ಟುಹೋದಾಗ, ಜ್ಞಾನಾಗ್ನಿ ಒಂದರ ಇರುವಿಕೆ ತಿಳಿಯುತ್ತಿದೆ.

ಈಗ ಅಸಲು ವಿಷಯಕ್ಕೆ ಬರೋಣ. ಅದ್ವೈತ ಸಿದ್ಧಾಂತವನ್ನು ಶಂಕರಾಚಾರ್ಯರು ಪ್ರತಿಪಾದಿಸಿದ್ದಾನೆ. ವಿಶಿಷ್ಟಾದ್ವೈತವನ್ನು ರಾಮನುಜಾ ಚಾರ್ಯರು ಪ್ರತಿಪಾದಿಸಿದ್ದಾನೆ. ಈಗ ನಾವು ತ್ರೈತಾಸಿದ್ಧಾಂತವನ್ನು ಪ್ರತಿಪಾದಿಸಿದ್ದೇವೆ. ಗಾದೆಯಲ್ಲಿ, ವೈಷ್ಣವರದ್ದು ಭಕ್ತಿ, ಅದ್ವೈತರದ್ದು ಯುಕ್ತಿ ಎಂದು ಬರೆದಿದ್ದಾರೆ. ಆದರೇ ಅವರಿಗೇನಿದೆಯೋ ನಮಗೆ ತಿಳಿಯದು ಆದರೇ, ನಮಗೆ ಶಕ್ತಿ ಇದೆಯೆಂದು ತಿಳಿಯುವುದರಿಂದ ತ್ರೈತರದ್ದು ಶಕ್ತಿ ಎಂದು

ಬರೆದಿದ್ದೇವೆ. ಈಗ ಕೆಲವರು "ನಿಮ್ಮದು ಶಕ್ತಿಯೆಂದು ಹೇಗೆ ಹೇಳುತ್ತಿದ್ದೀರ" ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿದೆ. ಚಿಕ್ಕ ಜಪಮಾಲೆಯಲ್ಲಿ 54 ಮಣಿಗಳಿರುವಂತೆ ನಮ್ಮ ಗ್ರಂಥಮಾಲೆಯಲ್ಲಿ 54 ಗ್ರಂಥಗಳಿರಬೇಕೆಂದು ತಿಳಿದು ಇಲ್ಲಿಗೆ, 40 ಗ್ರಂಥಗಳವರೆಗು ಬರೆಯುವುದು ನಡೆದಿದೆ. ನಮ್ಮಿಂದ ಬರೆಯಲ್ಪಟ್ಟ ಪ್ರತಿ ಗ್ರಂಥವು ಸಜೀವವಾಗಿ ತಯಾರಾಗಿದೆ. ಗ್ರಂಥದಲ್ಲಿ ಜೀವವಿರುವುದೇ ಅಲ್ಲದೇ, ಆ ಜೀವಿಗೆ ಶಕ್ತಿಕೂಡಾ ಇರುವುದು ನಡೆದಿದೆ. ಗ್ರಂಥಗಳಲ್ಲಿನ ಜೀವವು ಕರ್ಮಗಳಿರುವ ಜೀವವಾಗಲ್ಲದೇ, ಕರ್ಮ ಗಳಿಲ್ಲದ ಭೂತಗಳ, ಗ್ರಹಗಳೊಳಗಿನದೆಂದುಕೊಳ್ಳಿ. ಗ್ರಂಥಗಳಲ್ಲಿ ಭೂತಗಳ ಜೀವವಿರುವುದರಿಂದ, ನಾನು ಗ್ರಂಥಗಳನ್ನು ಉದ್ದೇಶಿಸಿ ಹೇಳುವಾಗ ಅವು ನನ್ನ ಮಕ್ಕಳಿದ್ದಂತೆ ಎಂದು ಹೇಳುವುದು ಕೂಡಾ ನಡೆದಿದೆ. ಈಗಿರುವ 40 ಗ್ರಂಥ ಮಕ್ಕಳಲ್ಲಿ ಎಲ್ಲರೂ ಶಕ್ತಿ ಇರುವವರಾಗಿ ಇರುವುದೇ ಅಲ್ಲದೆ, ಕೆಲವರು ಸ್ವಲ್ಪ ಪ್ರಭಾವವನ್ನು ಹೊರಗೆ ತೋರಿಸುತ್ತಾ ತಮ್ಮ ಹೆಸರು ಹೊರಗೆ ಬರುವಂತೆ ಮಾಡಿಕೊಂಡಿದ್ದಾರೆ. ಉದಾಹರಣೆಗೆ ಹೇಳಿದರೆ **"ಮಂತ್ರ-ಮಹಿಮೆ"** ಎನ್ನುವ 48 ಪುಟಗಳ ಚಿಕ್ಕ ಗ್ರಂಥವು ಚೇಳಿನ ವಿಷದಿಂದ ಬಾಧೆಪಡುವವರ ಬಾಧೆಯನ್ನು ತನ್ನ ಶಕ್ತಿಯಿಂದ ಒಂದು ಅಥವಾ ಎರಡು ನಿಮಿಷಗಳಲ್ಲಿ ಇಲ್ಲದಂತೆ ಮಾಡುತ್ತಿದೆ. ತಲೆನೋವು ಇರುವವನ ಕರ್ಮವನ್ನು ಗ್ರಂಥದ ಮೇಲಿನ ವಿಶ್ವಾಸದಿಂದ ಗ್ರಂಥಕ್ಕೆ ನಮಸ್ಕರಿಸಿ ತಲೆಮೇಲೆ ಇಟ್ಟುಕೊಳ್ಳುತ್ತಲೇ, ಅವನ ನೋವು ಮಾಯವಾಗುವಂತೆ ಮಾಡುತ್ತಿದೆ. ಇದೆಲ್ಲವೂ ಪ್ರತ್ಯಕ್ಷ ಪ್ರಮಾಣವಾಗಿ ತಿಳಿಯುವುದರಿಂದ, ಆ ಚಿಕ್ಕ ಗ್ರಂಥದಲ್ಲಿ ಶಕ್ತಿ ಇರುವಂತೆ ತಿಳಿಯುತ್ತಿದೆ. ಇದೇ ವಿಧವಾಗಿ **"ದೆವ್ವಗಳ-ಭೂತಗಳ ಯಥಾರ್ಥ ಸಂಘಟನೆಗಳು"** ಎನ್ನುವ ಗ್ರಂಥ, **"ಸತ್ಯಾನ್ವೇಷಿ"** ಎನ್ನುವ ಗ್ರಂಥ ತಮ್ಮ ಸಾಮರ್ಥ್ಯವನ್ನು ತೀಕ್ಷ್ಣಣವಾಗಿ ಹೊರಗೆ ತೋರಿಸುತ್ತಿವೆ. ನಮ್ಮಿಂದ ಬರೆಯಲ್ಪಟ್ಟ ಎಲ್ಲಾ ಗ್ರಂಥಗಳಲ್ಲಿಯೂ ಭೂತಗಳೆನ್ನುವ ಜೀವಿಯು ಇರುವು ದಲ್ಲದೇ, ಆ ಜೀವಿಗೆ ಶಕ್ತಿ ಕೂಡಾ ಇರುವಂತೆ ತಿಳಿಯುತ್ತಿದೆ. ಉಳಿದವರು ಬರೆದ ಗ್ರಂಥಗಳಲ್ಲಿ ಅಂತಹ ಶಕ್ತಿಯಿಲ್ಲ ಮತ್ತು ಜೀವವೂ ಇಲ್ಲ. ಆದ್ದರಿಂದ ಅವು ವಸ್ತುಗಳೊಂದಿಗೆ ಸಮಾನ. ಇಲ್ಲಿ ತಯಾರಾದ "ತ್ರೈತ ಸಿದ್ಧಾಂತ ಭಗವದ್ಗೀತೆ" ಎನ್ನುವ ಗ್ರಂಥದಲ್ಲಿನ ಜೀವವು ಬಹಳ ಸಹನೆ ಇರುವವನೇ

ಅಲ್ಲದೇ, ಬಹಳ ಶಕ್ತಿವಂತವಾದವನು. ತನ್ನನ್ನು ದೂಷಿಸಿದವರನ್ನು ನಿಧಾನವಾಗಿ ಭೂಮಿಮೇಲೆ ಇಲ್ಲದಂತೆ ಮಾಡಿದ್ದಾನೆ. ಉಳಿದ ಕೆಲವು ಗ್ರಂಥಗಳು ತಮ್ಮನ್ನು ಹೇಳನವಾಗಿ ನೋಡಿದವರನ್ನು ಬಹಳ ಕಷ್ಟಗಳಪಾಲು ಮಾಡಿವೆ. ಇವೆಲ್ಲವನ್ನು ಗಮನಿಸಿದ ನಾವು, ಅಸಂಪೂರ್ಣವಾಗಿರುವ ಗಾದೆಯನ್ನು ತ್ರೈತರದ್ದು ಶಕ್ತಿ ಎಂದು ಪೂರ್ತಿಮಾಡಿ ಬರೆದಿದ್ದೇವೆ.

## 27. ಸುತರು (ಗಂಡು ಮಕ್ಕಳು) ಇಲ್ಲದವನಿಗೆ ಗತಿಗಳು ಇಲ್ಲ

ಸುತರು ಎಂದರೇ ಗಂಡುಮಕ್ಕಳು ಎಂದು ಅರ್ಥ. ಮಕ್ಕಳು ಇಲ್ಲದವನಿಗೆ ಮೋಕ್ಷಬರುವುದಿಲ್ಲ ಎಂದು ಹೇಳುವುದಕ್ಕೆ "ಸುತರು ಇಲ್ಲದವನಿಗೆ ಗತಿಗಳು ಇಲ್ಲ" ಎನ್ನುವ ಗಾದೆಯನ್ನು ಹೇಳಿದ್ದಾರೆ. ಈ ಗಾದೆ ಪ್ರಕಾರ ಹೋದರೆ ಯಾರೂ ಮೋಕ್ಷವನ್ನು ಹೊಂದುವುದಕ್ಕೆ ಅವಕಾಶವೇ ಇಲ್ಲವೆಂದು ತಿಳಿಯುತ್ತಿದೆ. ಏಕೆಂದರೇ! ಭೂಮಿಮೇಲೆ ಪುರುಷನು, ದೇವರು ಒಬ್ಬನೇ ಎಂದು ಬ್ರಹ್ಮವಿದ್ಯೆ ಹೇಳುತ್ತಿದೆ. ರಾಜಸ್ಥಾನ್ ಚರಿತ್ರೆಯಲ್ಲಿನ ಮೀರಾಬಾಯಿ, ಕೃಷ್ಣನು ಹೊರತು ಲೋಕದಲ್ಲಿ ಪುರುಷರು ಯಾರೂ ಇಲ್ಲವೆಂದು ಹೇಳಿದ್ದಾಳೆ. ಅಷ್ಟೇ ಅಲ್ಲದೆ ಭಗವದ್ಗೀತೆಯಲ್ಲಿ ಗುಣತ್ರಯ ವಿಭಾಗಯೋಗವೆನ್ನುವ ಅಧ್ಯಾಯದಲ್ಲಿ 3,4 ಶ್ಲೋಕಗಳಲ್ಲಿ ದೇವರು ಒಬ್ಬನೇ ಪುರುಷನೆಂದು, ಆತನ ಬೀಜದಿಂದಲೇ ಸಮಸ್ತ ಮಾನವ ಜಾತಿ ಹುಟ್ಟುತ್ತಿದೆಯೆಂದು, ಎಲ್ಲರಿಗೂ ತಂದೆ ದೇವರೇಯೆಂದು ಹೇಳಲ್ಪಟ್ಟಿದೆ. ಹಾಗಿರುವಾಗ ಮನುಷ್ಯರು ಎಲ್ಲರೂ ಪುರುಷತ್ವ ಇಲ್ಲದವರೇ ಎಂದು ತಿಳಿಯುತ್ತಿದೆ. ಮನುಷ್ಯರು ಹೆಸರಿಗೆ ಪುರುಷರಾದರೂ, ಮನುಷ್ಯರ ಬೀಜದಿಂದ ಯಾರೂ ಹುಟ್ಟಲಿಲ್ಲವೆಂದು ತಿಳಿಯುತ್ತಿದೆ. ಇದು ಸ್ವಲ್ಪ ವಿಚಿತ್ರವಾದ ಮಾತೇ ಆದರೂ, ಮನುಷ್ಯರೆಲ್ಲರನ್ನು ಆಲೋಚಿಸುವಂತೆ ಮಾಡುವ ವಿಷಯವಿದು. ಮನುಷ್ಯನಾಗಿರುವ ಜೀವಿಯು, ಮನುಷ್ಯನ ಶರೀರದಲ್ಲಿ ಒಂದು ಭಾಗವಾಗಿ ಇದ್ದಾನೆ. ಹಾಗಿರುವಾಗ ಜೀವಿಯು ತನ್ನನ್ನು ಕುರಿತು ತಾನು ಆಲೋಚಿಸಿದರೇ, ಜೀವಾತ್ಮ ಪುರುಷನಲ್ಲಿನ ಭಾಗವೇ ಆದರೂ, ಪ್ರಕೃತಿಯೊಂದಿಗೆ ಬೆರೆತು ಹುಟ್ಟಿರುವುದರಿಂದ, ಪ್ರಕೃತಿ ಸ್ತ್ರೀ ತತ್ವ ಆಗಿರುವುದರಿಂದ, ಜೀವಾತ್ಮ ಪ್ರಕೃತಿಯೊಂದರ ಶರೀರದಲ್ಲಿ ಸಿಲುಕಿಕೊಂಡಿರುವವರೆಗು ಜೀವಿಗೆ ಪುರುಷ

ಲಕ್ಷಣಗಳು ಕೆಲವು, ಸ್ತ್ರೀ ಲಕ್ಷಣಗಳು ಕೆಲವು ಇರುತ್ತವೆ. ಆದ್ದರಿಂದ ಜೀವಾತ್ಮವನ್ನು ನಪುಂಸಕನೆಂದು ಹೇಳಬಹುದು. ವಿಶ್ವಕ್ಕೆಲ್ಲಾ ದೇವರು ಒಬ್ಬನೇ ಪುರುಷನಾಗಿದ್ದು, ಪ್ರಕೃತಿ ಒಂದೇ ಸ್ತ್ರೀಯಾಗಿ ಇದೆ. ಪ್ರಕೃತಿ ಪರಮಾತ್ಮರಿಗೆ ಹುಟ್ಟಿದ ಜೀವಿಗೆ, ತಾಯಿ ತಂದೆಯರ ಇಬ್ಬರ ಲಕ್ಷಣಗಳು ಇರುವುದರಿಂದ ಜೀವಿಯನ್ನು ನಪುಂಸಕನೆಂದು ಹೇಳುತ್ತಿದ್ದೇವೆ. ಪ್ರಕೃತಿ ಸ್ತ್ರೀಯಾಗಿರುವುದರಿಂದ, ಪ್ರಕೃತಿಗೆ ಗುರುತಾಗಿ ಭೂಮಿಮೇಲೆ ಸ್ತ್ರೀ ಶರೀರಗಳನ್ನು ಹುಟ್ಟಿಸುವುದು ನಡೆದಿದೆ. ಪರಮಾತ್ಮ ಪುರುಷನಾಗಿರುವುದರಿಂದ, ಪರಮಾತ್ಮನಿಗೆ ಗುರುತಾಗಿ ಪುರುಷ ರೂಪವನ್ನು ಭೂಮಿಮೇಲೆ ಹುಟ್ಟಿಸುವುದು ನಡೆದಿದೆ. ಪ್ರಕೃತಿ ಪುರುಷರಿಗೆ ಹುಟ್ಟಿದ ಜೀವಿಯು, ಇಬ್ಬರ ಲಕ್ಷಣಗಳು ಬೆರೆತ ನಪುಂಸಕನಾಗಿ ಇದ್ದಾನೆ. ಆದ್ದರಿಂದ ಜೀವಿಗೆ ಗುರುತಾಗಿ, ಭೂಮಿಮೇಲೆ ನಪುಂಸಕರನ್ನು ಕೂಡಾ ಹುಟ್ಟಿಸುವುದು ನಡೆದಿದೆ.

ಪ್ರಪಂಚದಲ್ಲಿ ಜೀವಿಗಳೆಲ್ಲರಿಗೂ ತಾಯಿ ಪ್ರಕೃತಿ ಆದಾಗ, ಹಾಗೇ ಎಲ್ಲರಿಗೂ ತಂದೆ ಪರಮಾತ್ಮ ಆದಾಗ, ಸಂತತಿ ಎಲ್ಲರೂ ಜೀವಾತ್ಮಗಳೇ ಆದಾಗ, ಸ್ಪಷ್ಟವಾಗಿ ಒಂದು ಲೆಕ್ಕ ತಿಳಿಯುತ್ತಿದೆ. ಅದೇನೆಂದರೇ! ಜೀವಿಯು ಎಲ್ಲಿ ಹುಟ್ಟಿದರೂ, ಎಲ್ಲಿದ್ದರೂ ಮಗನಾಗಿಯೇ ಇರುತ್ತಾನೆ ಹೊರತು ತಂದೆ ಎಂದಿಗೂ ಆಗುವುದಿಲ್ಲ. ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ಯಾವ ಮನುಷ್ಯನಾದರೂ, ತನ್ನನ್ನು ಮಗನಾಗಿ ಹೇಳಿಕೊಳ್ಳಬಹುದು ಆದರೆ, ತಂದೆಯಾಗಿ ಹೇಳಿಕೊಳ್ಳುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ಭಗವದ್ಗೀತಾ ಗ್ರಂಥದಲ್ಲಿ ಗುಣತ್ರಯ ವಿಭಾಗಯೋಗ ದಲ್ಲಿ, 3,4ನೆ ಶ್ಲೋಕಗಳಲ್ಲಿ **ನಿನಗೆ ತಂದೆ ಪರಮಾತ್ಮ, ತಾಯಿ ಪ್ರಕೃತಿಯೆಂದು ಭಗವಂತನು** ಹೇಳಿದ್ದಾನೆ. ಬೈಬಲ್ ಗ್ರಂಥದಲ್ಲಿ ಮತ್ತಾಯ ಸುವಾರ್ತೆ 23ನೇ ಅಧ್ಯಾಯದಲ್ಲಿ 9ನೇ ವಾಕ್ಯದಲ್ಲಿ **"ಭೂಮಿ ಮೇಲೆ ಯಾರನ್ನಾದರೂ ತಂದೆಯೆಂದು ಹೆಸರನ್ನು ಇಡಬೇಡ. ಒಬ್ಬನೇ ನಿಮ್ಮ ತಂದೆ. ಆತನು ಪರಲೋಕದಲ್ಲಿದ್ದಾನೆ."** ಎಂದು ಹೇಳಲ್ಪಟ್ಟಿದೆ. ಇನ್ನು ಇಸ್ಲಾಮ್ ಗ್ರಂಥವಾದ ಖುರಾನ್ ಗ್ರಂಥದಲ್ಲಿ 33ನೇ ಸೂರಾ "ಅಲ್ ಅಹ್‌ಜಾಬ್"ನಲ್ಲಿ 40ನೇ ಆಯತ್‌ನಲ್ಲಿ **"ಮಾನವರೇ ಮುಹಮ್ಮದ್ ನಿಮ್ಮಲ್ಲಿನ ಯಾವ ಪುರುಷನಿಗು ತಂದೆಯಲ್ಲ"** ಎಂದು ಬರೆಯಲ್ಪಟ್ಟಿದೆ. ನೋಡಿದಿರಾ! ಭಗವದ್ಗೀತೆಯಲ್ಲಿ, ಬೈಬಲ್‌ನಲ್ಲಿ, ಖುರಾನ್

ಗ್ರಂಥದಲ್ಲಿ ಒಬ್ಬ ಮನುಷ್ಯ ಎಂದಿಗೂ ಕುಮಾರನೇ ಹೊರತು ತಂದೆಯಲ್ಲ ಎನ್ನುವ ವಿಷಯವನ್ನು ಹೇಳಿದ್ದಾರೆ. ಮೂರು ಮೂಲಗ್ರಂಥಗಳಲ್ಲಿಯೂ ದೇವರನ್ನು ತಂದೆಯಾಗಿ ಹೇಳುವುದು ನಡೆದಿದೆ. ಮನುಷ್ಯನನ್ನು ತಂದೆ ಸ್ಥಾನದಲ್ಲಿ ಇಲ್ಲವೆಂದು ಹೇಳಲಾಗಿದೆ.

ಬ್ರಹ್ಮಜ್ಞಾನದ ಪ್ರಕಾರ ಯಾವ ಮನುಷ್ಯನಿಗೂ ಸುತರು ಇಲ್ಲ. ಸುತರು (ಗಂಡುಮಕ್ಕಳು) ಇಲ್ಲದವನು ಮೋಕ್ಷವನ್ನು ಹೊಂದಲಾರನು. ಆದ್ದರಿಂದ ಆ ವಿಷಯ ತಿಳಿಯುವುದಕ್ಕೆ "ಸುತರು ಇಲ್ಲದವನಿಗೆ ಗತಿಗಳು ಇಲ್ಲ" ಎನ್ನುವ ಗಾದೆಮಾತನ್ನು ಹೇಳಿದ್ದಾರೆ. ಮೋಕ್ಷವನ್ನು ಹೊಂದಬೇಕೆಂದುಕೊಂಡವನು, ದೈವಜ್ಞಾನವನ್ನು ಸಂಪೂರ್ಣವಾಗಿ ತಿಳಿದು ಯೋಗಿಯಾಗಿ ಬದಲಾಗಿ, ಕರ್ಮವನ್ನು ಇಲ್ಲದಂತೆ ಮಾಡಿಕೊಂಡಾಗ, ಆತನು ದೇವರೊಂದಿಗೆ ಸಮಾನವಾಗಿ ಬದಲಾಗಿ ಹೋಗಿ ಮುಕ್ತಿಯನ್ನು ಹೊಂದುವನು. ಕುಮಾರನಾಗಿದ್ದ ಜೀವಿಯು ದೈವಜ್ಞಾನವನ್ನು ತಿಳಿಯುವುದರಿಂದ ತಂದೆ ಸ್ಥಾನಕ್ಕೆ ಬೆಳೆಯಬಲ್ಲನು. ಆಗ ಆತನು ಎಲ್ಲರಿಗೂ ತಂದೆಯಾಗಿ ಬದಲಾಗಬಲ್ಲನು. ಮನುಷ್ಯ ಜ್ಞಾನವನ್ನು ತಿಳಿಯದವರೆಗು, ಯೋಗಿಯಾಗಿ ಬದಲಾಗದವರೆಗು ತಂದೆಗೆ ಮಗನಾಗಿಯೇ ಇರುತ್ತಾನೆ. ತಂದೆ ಸ್ಥಾನಕ್ಕೆ ಬೆಳೆಯಲಾರನು. ತಂದೆ ಸ್ಥಾನಕ್ಕೆ ಬೆಳೆದಾಗ ಸುತರು ಇರುತ್ತಾರೆ. ಮೋಕ್ಷ ಬರುತ್ತದೆ. ನೀವು ಮಗನ ಸ್ಥಾನದಿಂದ ತಂದೆ ಸ್ಥಾನಕ್ಕೆ ಬದಲಾಗಬೇಕೆಂದು ನಾವು, ನಿಮಗೆ ಕಥೆಗಳ ಜ್ಞಾನವನ್ನು ಒದಗಿಸುತ್ತಿದ್ದೇವೆ. ತತ್ತ್ವಗಳ ಜ್ಞಾನವನ್ನು ತಿಳಿಸಿದ್ದೇವೆ. ಬೈಗಳ ಜ್ಞಾನವನ್ನು ವಿವರಿಸಿದ್ದೇವೆ. ಪದ್ಯದಲ್ಲಿನ ಜ್ಞಾನವನ್ನು ಹೇಳಿದ್ದೇವೆ. ಈಗ ಗಾದೆಗಳ ಜ್ಞಾನವನ್ನು ತಿಳಿಸುತ್ತಿದ್ದೇವೆ. ಇದರ ನಂತರ ಒಗಟುಗಳ ಜ್ಞಾನವನ್ನು ತಿಳಿಸಬೇಕೆಂದುಕೊಂಡಿದ್ದೇವೆ. ಇಷ್ಟು ವಿಧಗಳಲ್ಲಿ ಜ್ಞಾನ ತಿಳಿದಾಗ, ಮನುಷ್ಯ ಜ್ಞಾನವನ್ನು ಆಚರಿಸಿ ಸುಲಭವಾಗಿ ಯೋಗಿಯಾಗಿ, ತಂದೆ ಸ್ಥಾನಕ್ಕೆ ಸೇರಿ ಮುಕ್ತಿಯನ್ನು ಹೊಂದಬಲ್ಲನು. ಈಗ ನೀನು ಮಗನೇ! ಸಂಪೂರ್ಣ ಜ್ಞಾನವನ್ನು ತಿಳಿದು ತಂದೆಯಂತೆ ಆಗುವುದಕ್ಕೆ ಇಂದಿನಿಂದ ಪ್ರಯತ್ನಿಸು.

# 28. ಸೊನ್ನೆಯಲ್ಲಿ ಇರುವುದು ಸೂಕ್ಷ್ಮ ಸೂಕ್ಷ್ಮದಲ್ಲಿ ಇರುವುದು ಮೋಕ್ಷ

ಗಣಿತ ಶಾಸ್ತ್ರದಲ್ಲಿ ಸಂಖ್ಯೆಗಳು ಒಟ್ಟು ಹತ್ತು ಇವೆ. ಮೊದಲನೆಯದು ಯಾವ ಬೆಲೆ ಇಲ್ಲದ ಸೊನ್ನೆ (0) ಯೊಂದಿಗೆ ಶುರುವಾಗಿ, ನಂತರ 1, 2,3,4,5,6,7,8,9 ವರೆಗು ಇವೆ. ಮೊದಲನೆಯದಾದ ಸೊನ್ನೆ, ಯಾವ ಮಾತ್ರ ಬೆಲೆ ಇಲ್ಲದಿರುವುದಾಗಿ ಇದೆ. ಸೊನ್ನೆ ನಂತರ ಏಕ ಇದೆ. ಏಕ ಎಂದರೆ ಒಂದು ಎಂದು ಅರ್ಥ. ಏಕದನಂತರ ಅನೇಕ ಇವೆ. ಅನೇಕ ಎಂದರೆ ಒಂದು ಅಲ್ಲದಿರುವುದು ಎಂದು ಅರ್ಥ. ಏಕವನ್ನು ಕೇಂದ್ರವಾಗಿ ಮಾಡಿಕೊಂಡು ಅನೇಕ ಎಂದರೆ, ಎರಡು ಅರ್ಥಗಳು ಬರುತ್ತವೆ. ಏಕಕ್ಕೆ ಮೇಲಕ್ಕೆ ಹೋದರೆ ಏಕವಲ್ಲದ್ದು ಸೊನ್ನೆಯಾಗುತ್ತದೆ. ಕೆಳಗಿನ ಕಡೆ ಹೋದರೆ ಏಕವಲ್ಲದ್ದು 2,3,4,5,6 ಮುಂತಾದವು ಆಗುತ್ತವೆ. ಏಕವಲ್ಲದ್ದು ಎಂದರೆ ಸೊನ್ನೆಯಾದರೂ ಆಗಬಹುದು. ಸೊನ್ನೆ ಏಕವಲ್ಲ ಅಲ್ಲವೆ! ಆದ್ದರಿಂದ ಅನೇಕ ಎನ್ನುವ ಮಾತಿಗೆ ಅರ್ಥವು ಸೊನ್ನೆಕೂಡ ಆಗಬಹುದು. ಇನ್ನೊಂದು ವಿಧವಾಗಿ, ಎರಡು ಅದಕ್ಕಿಂತ ಹೆಚ್ಚು ಸಂಖ್ಯೆಯೂ ಸಹ ಏಕವು ಅಲ್ಲ ಅಲ್ಲವೆ! ಆದ್ದರಿಂದ ಅನೇಕ ಎನ್ನುವ ಮಾತಿಗೆ ಎರಡೂ ಕಡೆ ಅರ್ಥವಿದೆ. ಅನೇಕ ಎನ್ನುವ ಮಾತನ್ನು ಕೇಳಿದವರು, ಒಬ್ಬರು ಸೊನ್ನೆ ಎಂದುಕೊಳ್ಳುವುದು, ಮತ್ತೊಬ್ಬರು ಎರಡು ಎಂದುಕೊಳ್ಳುವುದು ನಡೆಯಬಹುದು. ಹಾಗೆ ತಪ್ಪಾಗಿ ಅರ್ಥೈಸಿಕೊಳ್ಳದಂತಿರುವುದಕ್ಕೆ ಒಂದರ ನಂತರ ಇರುವ 2,3,4 ಮುಂತಾದವುಗಳನ್ನು ಅನೇಕ ಎನ್ನುವಂತೆ ಮಾಡಿ, ಒಂದಕ್ಕಿಂತ ಮೊದಲಿರುವ ಸೊನ್ನೆ ಅರ್ಥವಾಗುವುದಕ್ಕೆ ಏಕಾಗ್ರ ಎಂದಿದ್ದಾರೆ. ಏಕಾಗ್ರ ಎಂದರೆ ಒಂದಕ್ಕಿಂತ ಮೇಲೆ ಇರುವುದೆಂದು ಅರ್ಥ. ಒಂದಕ್ಕಿಂತ ಮೇಲೆ ಇರುವುದು ಸೊನ್ನೆಯೇ, ಆದ್ದರಿಂದ ಏಕಾಗ್ರ ಎನ್ನುವ ಮಾತು ಸರಿ ಹೋಗಿದೆ.

ಏಕಾಗ್ರದಲ್ಲಿರುವ ಸೊನ್ನೆ ಎಷ್ಟೋ ಪ್ರತ್ಯೇಕತೆ ಹೊಂದಿದೆ. ಸೊನ್ನೆ ನಂತರ ಇರುವ ಒಂಭತ್ತು ಅಕ್ಷರಗಳಿಗೆ ಇಲ್ಲದ ಪ್ರತ್ಯೇಕತೆ ಸೊನ್ನೆಗೆ ಇದೆ. ಒಂದರಿಂದ ಒಂಭತ್ತರವರೆಗು ಪ್ರತಿ ಅಕ್ಷರಕ್ಕೂ ಮೊದಲು, ಕೊನೆಯು ಇರುತ್ತದೆ. ಉದಾಹರಣೆಗೆ ಕೆಲವು ಅಂಕೆಗಳನ್ನು ತೆಗೆದುಕೊಂಡು ನೋಡೋಣ.




ಈ ವಿಧವಾಗಿ ಒಂಭತ್ತರವರೆಗು ಪ್ರತಿ ಅಂಕೆಗೂ ಆದಿ, ಅಂತ್ಯ ಎರಡನ್ನೂ ಗುರುತಿಸಬಹುದು. ಆದರೇ ಒಂದು ಸೊನ್ನೆಗೆ ಮಾತ್ರ ಯಾರೂ, ಆದಿ ಅಂತ್ಯ ಗುರುತಿಸಲಾರರು. ಸೊನ್ನೆಗೆ ಆದಿ ಅಂತ್ಯ ಕಾಣಿಸುವುದಿಲ್ಲ.



ಸೊನ್ನೆಗೆ ಯಾವುದು ಮೊದಲೋ ಯಾವುದು ಕೊನೆಯೋ ಯಾರೂ ಹೇಳಲಾರರು. ಈ ಗಾದೆಯಲ್ಲಿ ಸೊನ್ನೆಯಲ್ಲಿ ಸೂಕ್ಷ್ಮವಿದೆಯೆಂದಿದ್ದಾರೆ. ಸೂಕ್ಷ್ಮ ಎಂದರೆ ಕಾಣಿಸದ ಭಾವವು ಎಂದು ಅರ್ಥ. ಆ ಸೂಕ್ಷ್ಮ ಏನೆಂದರೆ! ಆದಿ ಅಂತ್ಯ ಇಲ್ಲದವನು ದೇವರೊಬ್ಬನೇ ಇದ್ದಾನೆ. ಸೊನ್ನೆಯಲ್ಲಿಯೂ ಸಹ ಆದಿ ಅಂತ್ಯ ಇಲ್ಲ, ಆದ್ದರಿಂದ ಸೊನ್ನೆಯಲ್ಲಿ ಸೂಕ್ಷ್ಮವಿದೆ ಎಂದಿದ್ದಾರೆ. ಸೂಕ್ಷ್ಮವಾದವನು, ಯಾರಿಗೂ ತಿಳಿಯದವನು ದೇವರೇ, ಆದ್ದರಿಂದ ಸೂಕ್ಷ್ಮದಲ್ಲಿ ಇರುವುದು ಮೋಕ್ಷ ಎಂದಿದ್ದಾರೆ. ಈಗ ಏಕಾಗ್ರತೆ ಎಂದರೆ, ಏಕದ ಮೇಲೆ ಇರುವ ಸೊನ್ನೆ ಎಂದು ಅರ್ಥ ಬರಬಲ್ಲದು. ಹಾಗೆಯೇ ಯಾವೊಂದು ಆಗದಿರುವಂತಹ ದೇವರು ಎಂದು ಅರ್ಥ ಮಾಡಿಕೊಳ್ಳಬಹುದು. ಇನ್ನೂ ಆದಿ ಅಂತ್ಯ ಇಲ್ಲದ ದೇವರೆಂದು ಸಹ ಅರ್ಥಮಾಡಿಕೊಳ್ಳಬಹುದು. ಆದ್ದರಿಂದ ನಮ್ಮ ಹಿರಿಯರು ಬಹು ಬುದ್ಧಿವಂತಿಕೆಯಿಂದ, ಸುಲಭವಾಗಿ, ಈ ಗಾದೆಮಾತನ್ನು ತಯಾರು ಮಾಡಿದ್ದಾರೆ. ಈ ಗಾದೆಮಾತನ್ನು ನೋಡಿದ ಕೂಡಲೇ ಯಾರಿಗಾದರೂ ದೇವರು ನೆನಪಿಗೆ ಬರಬಲ್ಲನು. ಸಾಧನೆ ಮಾಡುವವರು ಮನಸ್ಸನ್ನು ಏಕಾಗ್ರತೆ ಪಡಿಸಿಕೊಳ್ಳುವುದು ಎಂದರೆ, ಧ್ಯಾಸ(ಗಮನ)ವೆಲ್ಲವನ್ನೂ ಇಟ್ಟುಕೊಳ್ಳಬೇಡವೆಂದು ಅರ್ಥ.

## 29. ನನ್ನನ್ನು ನೋಡಿದರೆ ನಿನ್ನನ್ನು ಕಾಯುತ್ತೇನೆ

ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗವೆನ್ನುವ ಅಧ್ಯಾಯದಲ್ಲಿ 22ನೇ ಶ್ಲೋಕ ಹೀಗೆ ಇದೆ.

**ಶ್ಲೋ : ಅನನ್ಯಾಶ್ಚಿನ್ತ ಯನ್ತೋಮಾಂ ಯೇ ಜನಾಃ ಪರ್ಯುಪಾಸತೇ ।**

**ತೇಷಾಂ ನಿತ್ಯಾಭಿ ಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್॥**

**ಭಾವಾರ್ಥ :–** "ಯಾರಾದರೇ ಅನ್ಯಚಿಂತೆ ಇಲ್ಲದೇ ನನ್ನನ್ನೇ ಉಪಾಸಿಸುವನೋ, ಯಾರಾದರೇ ನಿತ್ಯ ನನ್ನ ಧ್ಯಾಸವನ್ನೇ ಹೊಂದಿರಬೇಕೆಂದು ಅಂದು ಕೊಳ್ಳುತ್ತಿದ್ದಾನೋ, ಅವನ ಯೋಗವೊಂದರ ಕ್ಷೇಮವನ್ನು ನಾನೇ ನೋಡಿ ಕೊಳ್ಳುತ್ತೇನೆ." ಈ ಶ್ಲೋಕದಲ್ಲಿ ಏನು ಹೇಳಿದ್ದಾರೋ, ಅದೇ ವಿಷಯವನ್ನು ಈ ಗಾದೆಯಲ್ಲಿ ಹೇಳುವುದು ನಡೆದಿದೆ. ಯಾವ ವ್ಯಕ್ತಿ ಆದರೂ ವಿಶ್ವವೆಲ್ಲದಕ್ಕೂ ದೇವರು ಒಬ್ಬನೇಯೆಂದು ಗ್ರಹಿಸಿ, ಆತನನ್ನು ಹೊರತುಪಡಿಸಿ ಇರುವ ವರ್‍ಯಾರಾದರೂ ದೇವರಿಂದ ಸೃಷ್ಠಿಸಲ್ಪಟ್ಟವರೇಯೆಂದು, ಅಸಲಾದ ದೇವರ ಮೇಲೆಯೆ ಧ್ಯಾಸ ಹೊಂದಿ, ಆತನ ಬಳಿಗೇ ಸೇರಿಹೋಗಬೇಕೆಂದು ಪ್ರಯತ್ನಿಸುವ ವನ್ಯಾರಾದರೂ ಆಗಲಿ, ಅವನನ್ನು ದೇವರು ಅವನ ಉದ್ದೇಶದಿಂದ ಪಕ್ಕಕ್ಕೆ ಹೋಗದಂತೆ ನೋಡುವನು. ಮನುಷ್ಯ ದೇವರನ್ನು ಕುರಿತು ಎಷ್ಟು ಗಾಢವಾಗಿ ಪ್ರಯತ್ನ ಮಾಡುತ್ತಿದ್ದಾನೋ, ಅಷ್ಟೇ ದೃಷ್ಠಿ ಅವನ ಮೇಲೆ ದೇವರು ಇಡುತ್ತಾನೆ. ದೇವರು ಕೆಲಸ ಮಾಡದವನಾದ್ದರಿಂದ, ದೇವರ ಪರಿಪಾಲನೆ ಆತನಿಗೆ ಯಾವ ಆತಂಕ ಇಲ್ಲದಂತೆ ಮಾಡುತ್ತದೆ. ಆದ್ದರಿಂದ "ನನ್ನನ್ನು ನೋಡಿದರೆ ನಿನ್ನನ್ನು ಕಾಯುತ್ತೇನೆ" ಎಂದು ಈ ಗಾದೆಯಲ್ಲಿ ಹೇಳುವುದು ನಡೆದಿದೆ. ಕೆಲವರು ಎಷ್ಟು ಭಕ್ತಿ ಹೊಂದಿದ್ದರೂ, ಯಾವುದಾದರೂ ಪ್ರಪಂಚ ಸಂಬಂಧವಾದ ರೋಗವೋ, ಆರ್ಥಿಕ ಸಮಸ್ಯೆಯೋ ಬಂದಾಗ, ನಾನು ದೇವರ ಮೇಲೆ ಎಷ್ಟೋ ಭಕ್ತಿಯಿಂದ ಇದ್ದೀನಲ್ಲವೇ! ನನಗೆ ಈ ಸಮಸ್ಯೆ ಏಕೆ ಬಂದಿದೆಯೆಂದು, ದೇವರು ತನ್ನನ್ನು ಗಮನಿಸಲಿಲ್ಲವೆಂದು, ಅಂದುಕೊಳ್ಳುವುದು ನಡೆಯುತ್ತಿರುತ್ತದೆ. ಆದರೇ ದೇವರಿಗೆ ತಿಳಿಯದಂತೆ, ದೇವರ ಪರಿಪಾಲನೆಗೆ ತಿಳಿಯದಂತೆ, ಪ್ರಪಂಚದಲ್ಲಿ ಏನೂ ನಡೆಯುವುದಿಲ್ಲ. ಎಲ್ಲಾ ದೇವರಿಗೆ ತಿಳಿದೇ ನಡೆಯುತ್ತಿರುತ್ತವೆ. ಮನುಷ್ಯ ದೇವರ ಮೇಲೆ ಭಕ್ತಿ ಹೊಂದಿದ್ದು, ದೇವರು ಒಬ್ಬನೇ ಕರ್ತ ಎಂದು ತಿಳಿದಿರುವುದರಿಂದ, ಅದೇ ಉದ್ದೇಶದಲ್ಲಿ ಆತನನ್ನು ಇರುವಂತೆ ಮಾಡಿ, ಆ ಭಾವದಿಂದ ಬೇರೆಯಾಗದಂತೆ, ಆತನ ಭಕ್ತಿ ಮಾರ್ಗಕ್ಕೆ ಆತಂಕ ಉಂಟಾಗದಂತೆ ದೇವರು ನೋಡಿಕೊಳ್ಳುತ್ತಾನೆ. ಅಷ್ಟೇ ಹೊರತು ಉಳಿದ ಪ್ರಪಂಚ ಸಂಬಂಧ ಕರ್ಮಗಳೆಲ್ಲವನ್ನು ತೆಗೆದುಹಾಕುತ್ತಾನೆಂದು ಅಂದುಕೊಳ್ಳಬಾರದು. ಮೇಲಿನ ಶ್ಲೋಕದಲ್ಲಿಯೂ ಸಹ ಯೋಗವೊಂದರ ಕ್ಷೇಮವನ್ನು ಕಾಳಜಿಯಿಂದ

ನೋಡುತ್ತೇನೆಂದು ಹೇಳಿದ್ದಾನೆ ಹೊರತು, ನಿನ್ನ ಪ್ರಪಂಚ ಕೆಲಸಗಳೆಲ್ಲವೂ ಈಡೇರಿಸುತ್ತೇನೆಂದು ಹೇಳಲಿಲ್ಲ ಅಲ್ಲವೆ! ಮೊದಲು ಭಕ್ತನ ಉದ್ದೇಶ ದೇವರನ್ನು ಸೇರಬೇಕೆಂದೇ ಹೊರತು, ಪ್ರಪಂಚ ಕೋರಿಕೆಗಳ ನಿಮಿತ್ತ ದೇವರನ್ನು ಆಶ್ರಯಿಸಲಿಲ್ಲ ಅಲ್ಲವೆ! ಈ ಗಾದೆಯಲ್ಲಿ "ನನ್ನನ್ನು ನೋಡಿದರೆ ನಿನ್ನನ್ನು ಕಾಯುತ್ತೇನೆ" ಎಂದಿದ್ದಾನೆ. ನಿನ್ನನ್ನು ಕಾಯುತ್ತೇನೆ ಎಂದರೆ ಶ್ಲೋಕದಲ್ಲಿ ಹೇಳಿದಂತೆ, ಯೋಗಕ್ಷೇಮವನ್ನು ಕುರಿತೇ ಹೊರತು, ಮನುಷ್ಯನ ಕ್ಷೇಮವನ್ನು ಕುರಿತು ಅಲ್ಲವೆಂದು ತಿಳಿಯಬೇಕು. ಪ್ರಪಂಚ ಕೋರಿಕೆಗಳನ್ನು ಬಿಟ್ಟುಕೊಳ್ಳುವುದೇ ದೇವರ ಜ್ಞಾನವಾದ್ದರಿಂದ, ಜ್ಞಾನಿಯಾದವನು ವಜ್ರಗಳಿಗೋಸ್ಕರ ಹೋಗಿ ಹುಣಿಸೆ ಕಾಯಿಗಳನ್ನು ಹೇಗೆ ಆಸೆ ಪಡುವುದಿಲ್ಲವೋ, ಅದೇ ವಿಧವಾಗಿ ದೇವರನ್ನು ಆಸೆಪಟ್ಟವನು ಪ್ರಪಂಚ ವಿಷಯಗಳನ್ನು ಆಸೆಪಡುವುದಿಲ್ಲ. ಅದೇ ವಿಧವಾಗಿ ದೇವರೂ ಸಹ ತನ್ನ ಭಕ್ತನಿಗೆ, ತನ್ನ ಹತ್ತಿರಕ್ಕೆ ಸೇರುವುದಕ್ಕೆ ಬೇಕಾದ ಫಲವನ್ನು ಕೊಟ್ಟು, ದೈವಮಾರ್ಗದಲ್ಲಿ ಯಾವ ಆತಂಕ ಉಂಟಾಗದಂತೆ ಮಾಡುತ್ತಾನೆ.

## 30. ಹೆಣ್ಣೇ ಅಮೃತ, ಹೆಣ್ಣೇ ಹಾಲಾಹಲ

ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ಪುರುಷನೆಂದರೇ ದೇವರೆಂದು, ಸ್ತ್ರೀಯೆಂದರೆ ಪ್ರಕೃತಿಯೆಂದು ತಿಳಿದುಕೊಂಡಿದ್ದೇವೆ. ದೇವರು ಕಾಣಿಸದವನು, ಆದರೂ ಭಗವಂತನಾಗಿ ನಮ್ಮ ಮುಂದಕ್ಕೆ ಬಂದು ಮಾತನಾಡುತ್ತಾನೆ. ಪ್ರಕೃತಿ ಕಾಣಿಸುತ್ತಿದೆ, ಆದರೂ ಮಾಯೆಯಾಗಿ, ಕಾಣಿಸದಂತೆ ನಮ್ಮಲ್ಲಿ ಕೆಲಸ ಮಾಡುತ್ತಿದೆ. ಕಾಣಿಸದ ದೇವರು ಕಾಣಿಸುವ ಭಗವಂತನಾಗಿ ಬಂದು, ಮನುಷ್ಯ ಮೋಕ್ಷ ಹೊಂದುವುದಕ್ಕೆ ಬೇಕಾದ ಜ್ಞಾನವನ್ನು ಹೇಳಿದರೇ, ಕಾಣಿಸುವ ಪ್ರಕೃತಿ ಕಾಣಿಸದ ಮಾಯೆಯಾಗಿ ಇದ್ದು, ಮನುಷ್ಯ ಮೋಕ್ಷ ಹೊಂದದಂತೆ ಇರುವುದಕ್ಕೆ ಬೇಕಾದ ಅಜ್ಞಾನವನ್ನು ಬೋಧಿಸುತ್ತಿದೆ. ಪ್ರಕೃತಿ ಸ್ತ್ರೀ ಸ್ವರೂಪ, ಆದ್ದರಿಂದ ಪ್ರಕೃತಿಯೇ ಮಾಯೆಯಾಗಿದ್ದು, ಅಜ್ಞಾನದೊಳಗೆ ಮನುಷ್ಯನನ್ನು ಹೋಗುವಂತೆ ಮಾಡುವುದರಿಂದ, ಹೆಣ್ಣೇ ಹಾಲಾಹಲ ಎಂದು ಈ ಗಾದೆಯಲ್ಲಿ ಹೇಳುವುದಾಗಿದೆ. ಹಾಲಾಹಲ ಎಂದರೆ ವಿಷವೆಂದು ಅರ್ಥ. ವಿಷ ಮನುಷ್ಯನನ್ನು ಹಿಂಸಿಸುವುದೇ,

ಆದ್ದರಿಂದ ಮನುಷ್ಯನನ್ನು ಕರ್ಮಗಳೊಳಗೆ ತಳ್ಳಿ, ಜನ್ಮಗಳಲ್ಲೇ ಸಿಲುಕಿಕೊಳ್ಳುವಂತೆ ಮಾಡುವ ಮಾಯೆಯನ್ನು ಹಾಲಾಹಲದ ಕೆಳಗೆ ಜಮಕಟ್ಟಿ, ಹೆಣ್ಣು ಹಾಲಾಹಲ ಎಂದು ಹೇಳುವುದರಲ್ಲಿ ತಪ್ಪಿಲ್ಲ. ಇಲ್ಲಿ ಹೆಣ್ಣು ಎಂದರೆ ಮನೆಯಲ್ಲಿ ಹೆಂಡತಿ ಎಂದೋ, ಬೀಧಿಯಲ್ಲಿ ವೇಶ್ಯೆಳೆಂದೋ ಅಂದುಕೊಳ್ಳಬಾರದು. ಹೆಣ್ಣೆಂದರೆ ಸ್ತ್ರೀ ತತ್ತ್ವವಿರುವ ಮಾಯೆಯೆಂದು ಅರ್ಥಮಾಡಿಕೊಳ್ಳಬೇಕು. ಆಡ (ಸ್ತ್ರೀ) ಎಂದರೆ ದೂರ ಎಂದು ಅರ್ಥ, ದೇವರಿಗೆ ದೂರವಾಗಿ ಕಳುಹಿಸುವ ಮಾಯೆ ಯನ್ನು ಸ್ತ್ರೀ ಎಂದು ಹೇಳಿದ್ದಾರೆ. ಹೆಣ್ಣು ಎಂದರೆ ದೂರ ಮಾಡುವುದು ಮಾಯೆಯೆಂದು ತಿಳಿಯುತ್ತಿದೆ. ದೇವರಿಗೆ ದೂರ ಮಾಡುವುದೇ ಕೆಲಸವಾಗಿರುವ ಮಾಯೆಯನ್ನು ವಿಷವೆಂದು ಹೇಳಿದವರೇ, ಅದೇ ಮಾಯೆಯನ್ನು ಅಮೃತವಾಗಿ ವರ್ಣಿಸುತ್ತಾ ಹೆಣ್ಣೇ ಅಮೃತ ಎಂದಿದ್ದಾರೆ. ವಿಷಕ್ಕೆ ಪೂರ್ತಿಯಾಗಿ ವಿರುದ್ಧ ವಾಗಿರುವ ಪದವು ಅಮೃತ. ವಿಷ ಸಾಯಿಸುವುದಾಗಿ, ಅಮೃತ ಬದುಕಿಸುವುದಾಗಿ ಇದೆ. ದೇವರಿಗೆ ದೂರಮಾಡುವ ಮಾಯೆಯನ್ನು ಹೆಣ್ಣು ಎಂದು ಅಂದರೂ, ಹೆಣ್ಣೇ ಹಾಲಾಹಲ ಎಂದರೂ ತಪ್ಪಿಲ್ಲ. ಅಷ್ಟರಲ್ಲೇ ಹೆಣ್ಣೇ ಅಮೃತ ಎನ್ನುವುದೇನೆಂದು ಯಾರಿಗಾದರೂ ಪ್ರಶ್ನೆ ಬರಬಲ್ಲದು. ಅದಕ್ಕೆ ಉತ್ತರ ಈ ರೀತಿ ಇದೆ.

ಹೆಣ್ಣು ಎಂದರೆ ದೂರ ಮಾಡುವುದು ಎಂದು ತಿಳಿದುಕೊಂಡಿದ್ದೇವೆ. ಯಾವುದಕ್ಕೆ ದೂರ ಮಾಡುವುದು ಎಂದು ಯಾರಾದರೂ ಕೇಳಿದರೇ, ದೇವರಿಗೆ ದೂರ ಮಾಡುವುದು ಎಂದು ಸುಲಭವಾಗಿ ಹೇಳಬಲ್ಲೆವು. ಆದರೇ ಆ ಮಾತನ್ನು ಕೇಳಿದವನು ನಕ್ಕು ದೇವರು ಹತ್ತಿರದಲ್ಲಿ ಇದ್ದಾನೆ, ದೂರದಲ್ಲಿ ಇದ್ದಾನೆ. ದೇವರು ಎಲ್ಲಾದರೂ ಇದ್ದಾನೆ. ಹಾಗಿರುವಾಗ ದೇವರಿಗೆ ದೂರ ಮಾಡುವುದು ಏನು ಇದೆ? ನೀನು ಎಲ್ಲಿದ್ದರೂ ದೇವರಿಗೆ ಹತ್ತಿರವಾಗಿಯೇ ಇದ್ದಾಗ, ದೇವರಿಗೆ ದೂರ ಮಾಡುವುದು ಎನ್ನುವುದರಲ್ಲಿ ಅರ್ಥವೇ ಇಲ್ಲ. ಜನ್ಮಗಳಿಗೆ ದೂರ ಮಾಡುವುದು ಎಂದರೆ ಯಾವುದಾದರೂ ಇರಬಹುದು ಆದರೆ, ದೇವರನ್ನು ದೂರ ಮಾಡುವುದು ಯಾವುದೂ ಇಲ್ಲ. ಹೆಣ್ಣು ಎಂದರೆ ದೂರ ಮಾಡುವುದು ಎನ್ನುವ ಅರ್ಥ ವಾಸ್ತವವೇ. ಆದರೇ ಮಾಯೆ ಎನ್ನುವುದು ಜನ್ಮಗಳಿಗೆ ನಿನ್ನನ್ನು ದೂರ ಮಾಡುವ ಹೆಣ್ಣು ಎಂದು ಏಕೆ ಅಂದುಕೊಳ್ಳಬಾರದು? ಜನ್ಮಗಳಿಗೆ

ದೂರ ಮಾಡುವ ಹೆಣ್ಣು ಮಾಯೆಯೇ ಆದ್ದರಿಂದ, ಹೆಣ್ಣೇ ಅಮೃತ ಎಂದು ಸಹ ಹೇಳಬಹುದು. ವಿಶೇಷವೇನೆಂದರೇ ಮನುಷ್ಯನಿಗೆ ದೇವರ ಕಡೆ ಇರುವ ಉದ್ದೇಶವನ್ನನುಸರಿಸಿ ಮಾಯೆ ಪ್ರವರ್ತಿಸುತ್ತಿದೆ. ದೇವರ ಕಡೆ ಒಳ್ಳೆಯ ಉದ್ದೇಶ ಇಲ್ಲದವನಿಗೆ ದೇವರು ಎದುರಾಗಿ, ಹತ್ತಿರದಲ್ಲೇ ಇದ್ದರೂ ತಿಳಿಯದಂತೆ, ಅವನ ಕಣ್ಣನ್ನು ಮುಚ್ಚಿಹಾಕುತ್ತಿದೆ. ದೇವರ ಬಗ್ಗೆ ಒಳ್ಳೆಯ ಉದ್ದೇಶ ಇರುವವನಿಗೆ ತನ್ನ ಮುಂದೆಯೇ, ಹತ್ತಿರವಾಗಿದ್ದ ದೇವರನ್ನು ತಿಳಿಯದಂತೆ, ಅವನ ಕಣ್ಣನ್ನು ತೆರೆಸುತ್ತದೆ.

ಪೂರ್ವದಲ್ಲಿ ಚಿಕ್ಕ ಮಕ್ಕಳು ಒಂದು ಆಟವನ್ನು ಆಡುತ್ತಿದ್ದರು. ಒಂದು ಹುಡುಗನಿಗೆ ಕಣ್ಣು ಮುಚ್ಚಿ ಎದುರುಗಡೆ ಕೆಲವು ಮಕ್ಕಳನ್ನು ಸಾಲಾಗಿ ನಿಲ್ಲಿಸಿ, ಕಣ್ಣು ಮುಚ್ಚಿದವರನ್ನು "ಅವರನ್ನು ಬಿಟ್ಟು ಇವರನ್ನು ಬಿಟ್ಟು ಇವರ್ಯಾರು?" ಎಂದು ಕೇಳುತ್ತಿದ್ದರು. ಆಗ ಕಣ್ಣು ಮುಚ್ಚಲ್ಪಟ್ಟವನು, ಎದುರುಗಡೆ ಇರುವವನನ್ನು ಗುರುತಿಸಬೇಕು. ಎದುರುಗಡೆ ಒಬ್ಬನು ಇದ್ದರೇ, ಮತ್ತೊಬ್ಬರ ಹೆಸರನ್ನು ಹೇಳಿದರೇ ಒಪ್ಪಿಕೊಳ್ಳದೆ ಮತ್ತೊಬ್ಬನನ್ನು ಎದುರುಗಡೆ ನಿಲ್ಲಿಸಿ, ಮೊದಲು ಕೇಳಿದಂತೆ 'ಇವರನ್ನು ಬಿಟ್ಟು ಇವರನ್ನು ಬಿಟ್ಟು ಇವನ್ಯಾರು?' ಎಂದು ಕೇಳುತ್ತಿದ್ದರು. ಕಣ್ಣು ಮುಚ್ಚಲ್ಪಟ್ಟವನು, ಎದುರುಗಡೆ ಇರುವವನನ್ನು ನೋಡದಂತೆಯೇ ಇವನು ಇಂತಹವನೆಂದು ಹೆಸರು ಹೇಳಿದರೇ, ಆಗ ಕಣ್ಣು ತೆರೆದು ನೋಡುವಂತೆ ಮಾಡುತ್ತಿದ್ದರು. ಕಣ್ಣು ಮುಚ್ಚಲ್ಪಟ್ಟವನು, ಎದುರುಗಡೆ ಇರುವವನನ್ನು ಅಂದಾಜಿನಿಂದ ಇಂತಹವನೆಂದು ಹೇಳುವುದಾದರೆ ಪ್ರತ್ಯಕ್ಷವಾಗಿ ಅವನನ್ನು ನೋಡುವಂತೆ ಮಾಡುವರು. ಎದುರಿಗಿರುವವನನ್ನು ಯಾವ ಮಾತ್ರ ಅಂದಾಜು ಮಾಡದಿರುವಾಗ, ನೀನು ಹೇಳಿರುವುದು ತಪ್ಪು ಎಂದು ಕಣ್ಣು ಮುಚ್ಚಿದವನು ಹೇಳಿ, ಕಣ್ಣಿಗೆ ಅಡ್ಡವಿರುವ ಕೈಯ್ಯನ್ನು ತೆಗೆಯುತ್ತಿರಲಿಲ್ಲ. ಹುಡುಗನ ಹಿಂದೆ ಕುಳಿತುಕೊಂಡು ತನ್ನ ಕೈಯಿಂದ ಹುಡುಗನ ಕೈಯ್ಯನ್ನು ಮುಚ್ಚಿ 'ಇವರನ್ನು ಬಿಟ್ಟು ಇವರನ್ನು ಬಿಟ್ಟು ಇವರ್ಯಾರು' ಎಂದು ಕೇಳುತ್ತಿದ್ದರು, ಎದುರುಗಡೆ ಇರುವವನನ್ನು ಸ್ವಲ್ಪ ಅಂದಾಜಿನಿಂದ ಗುರುತಿಸುವವರೆಗು, ತನ್ನ ಕೈಯ್ಯನ್ನು ಹುಡುಗನ ಕಣ್ಣಿನಿಂದ ತೆಗೆಯುತ್ತಿರಲಿಲ್ಲ. ಆ ಆಟವನ್ನು ನೋಡಿದರೆ ಹಿಂದೆ ಕುಳಿತುಕೊಂಡು ಕಣ್ಣು ಮುಚ್ಚುವವನು ಮಾಯೆಯೆಂದೂ, ಕಣ್ಣು ಮುಚ್ಚಲ್ಪಟ್ಟ

ಹುಡುಗನು ಮನುಷ್ಯ ಎಂದೂ, ಎದುರುಗಡೆ ಇರುವ ಹುಡುಗನು ದೇವರು ಎಂದು, ಎದುರುಗಡೆ ಇರುವವನನ್ನು ಇವನ್ಯಾರು ಎಂದು ಕೇಳಿದಾಗ, ತಪ್ಪಾಗಿ ಹೇಳುವುದು ದೇವರನ್ನು ಸರಿಯಾಗಿ ಗುರುತಿಸದೆ ತಪ್ಪಾಗಿ ಅರ್ಥಮಾಡಿಕೊಳ್ಳುವುದೆಂದೂ ಸಹ ಅರ್ಥವಾಗುತ್ತಿದೆ. ಇವರನ್ನು ಬಿಟ್ಟು ಇವರನ್ನು ಬಿಟ್ಟು ಎನ್ನುವ ಮಾತನ್ನು, ಓ ಅಜ್ಞಾನಿ ಓ ಅಜ್ಞಾನೀ ಎಂದು ಎರಡು ಬಾರಿ ಹೇಳಿ, ನಮ್ಮ ಅಜ್ಞಾನವನ್ನು ಮಾಯೆ ಗುರುತು ಮಾಡಿದಂತೆ ಇದೆ. ಎದುರಿಗಿರುವವನನ್ನು ಗುರುತಿಸದಿರುವಾಗ, ಸರಿಯಾಗಿ ಹೇಳುವವರೆಗು ತೋರಿಸುವವನೇ ಕಣ್ಣು ಮುಚ್ಚಿಡುತ್ತಿದ್ದಾನೆ. ಆದ್ದರಿಂದ ದೇವರನ್ನು ತಿಳಿಯದಂತೆ ನಮ್ಮ ಕಣ್ಣಿಗೆ ಅಡ್ಡವಾಗಿರುವ ಮಾಯೆಯೇ, ದೇವರನ್ನು ಸ್ವಲ್ಪ ಮಟ್ಟಿಗೆ ಅರ್ಥಮಾಡಿಕೊಂಡಾಗ ಕಣ್ಣನ್ನು ತೆರೆಸಿ ತೋರಿಸುತ್ತಿದೆ. ಇದೆಲ್ಲವೂ ಗಮನಿಸಿದರೇ ಮಾಯೆ, ಮನುಷ್ಯನ ಬಳಿ ಎರಡು ವಿಧಗಳಾಗಿ ಪ್ರವರ್ತಿಸುತ್ತಿದೆಯೆಂದು, ಆದ್ದರಿಂದಲೇ ಇದೆಲ್ಲವೂ ತಿಳಿದ ಹಿರಿಯರು ಮೇಲಿನ ಗಾದೆಯನ್ನು "ಹೆಣ್ಣೇ ಅಮೃತ, ಹೆಣ್ಣೇ ಹಾಲಾಹಲ" ಎಂದು ಹೇಳಿದ್ದಾರೆಂದು ಅರ್ಥವಾಗುತ್ತಿದೆ.

## 31. ನಾಲ್ವರ ನಂತರ ಹುಟ್ಟಿದರೇ, ನಡುಮನೆ ಬಂಗಾರವಾಗುತ್ತದೆ. ಮೂವರ ನಂತರ ಹುಟ್ಟಿದರೇ, ಮುಚ್ಚೋ ಮುಚ್ಚಳ ಇರದು.

ನಾಲ್ಕು ಜನರ ನಂತರ ಐದನೆ ಸಂತಾನವಾಗಿ ಹುಟ್ಟಿದವನು ಐಶ್ವರ್ಯವನ್ನು ಅನುಭವಿಸುತ್ತಿದ್ದಾನೆಂದು ಮೂವರ ನಂತರ ಹುಟ್ಟಿದವನಿಗೆ, ಅವನ ಜೀವನದಲ್ಲಿ ಮಡಿಕೆ ಮೇಲೆ ಮುಚ್ಚಿಕೊಳ್ಳುವ ಮುಚ್ಚಳ (ಮಣ್ಣಿನಿಂದ ಮಾಡಿದ ತಟ್ಟೆ) ಕೂಡಾ ಇರುವುದಿಲ್ಲವೆಂದು, ಬಹಳ ದರಿದ್ರ ಜೀವನವನ್ನು ಅನುಭವಿಸುತ್ತಾನೆಂದು ಕೆಲವರು ಹೇಳುತ್ತಿರುತ್ತಾರೆ. ಈ ಗಾದೆಯನ್ನು ನೋಡಿ ಕೆಲವರು ಹಾಗೆ ಹೇಳಿದ್ದಾರೆಂದು ಅರ್ಥವಾಗುತ್ತಿದೆ. ಈ ಗಾದೆಯಲ್ಲಿ ಮೇಲ್ನೋಟಕ್ಕೆ ಕಾಣಿಸುವುದು ಐಶ್ವರ್ಯ, ದರಿದ್ರ ಆದರೂ, ಅದೂ ಐದನೇ ಸಂತತಿಗೆ ಐಶ್ವರ್ಯ ಎಂದು, ನಾಲ್ಕನೆ ಸಂತತಿಗೆ ದರಿದ್ರ ಎಂದು ಇದ್ದರೂ, ಇಲ್ಲಿ ನಾವು ಗಾದೆಯನ್ನು ಬ್ರಹ್ಮವಿದ್ಯಾ ಸೂತ್ರಗಳನ್ನು ಅನುಸರಿಸಿ ಆಧ್ಯಾತ್ಮಿಕಕ್ಕೆ ಅನ್ವಯಿಸುವುದಾಗಿ ಇರುವಂತೆ ಹೇಳಿಕೊಳ್ಳಬೇಕು. ಗಾದೆಯಲ್ಲಿ ಮುಖ್ಯವಾಗಿ

ನಾಲ್ಕುಜನರ ನಂತರ ಎಂದೂ, ಮೂವರ ನಂತರ ಎಂದೂ ಇದೆ. ಮೊದಲು ನಾಲ್ವರ ನಂತರ ಹುಟ್ಟಿದವನು ಯಾರೊ, ಅವನಿಗಿಂತ ಮೊದಲು ಹುಟ್ಟಿದವರ್‍ಯಾರೋ ಗಮನಿಸೋಣ. ಮನುಷ್ಯನ ಶರೀರದಲ್ಲಿ ತಲೆಯಲ್ಲಿ ಗುಣಚಕ್ರವಿದೆಯೆಂದು ಮೊದಲೇ ತಿಳಿದುಕೊಂಡಿದ್ದೇವೆ. ಆ ಗುಣಚಕ್ರ ನಾಲ್ಕು ಭಾಗಗಳಾಗಿ ಇದೆಯೆಂದು ಕೂಡಾ ತಿಳಿದುಕೊಂಡಿದ್ದೇವೆ. ಗುಣಚಕ್ರದಲ್ಲಿನ ನಾಲ್ಕು ಭಾಗಗಳನ್ನು, ಹೊರಗಿನಿಂದ ಮೊದಲನೆಯದು ತಾಮಸ ಭಾಗವೆಂದು, ಎರಡನೆಯದು ರಾಜಸ ಭಾಗವೆಂದು, ಮೂರನೆಯದು ಸಾತ್ತ್ವಿಕ ಭಾಗವೆಂದು, ನಾಲ್ಕನೆಯದು ಆತ್ಮ ಭಾಗವೆಂದು (ಯೋಗ ಭಾಗವೆಂದು) ಹೇಳಿಕೊಂಡಿದ್ದೇವೆ. ಈ ನಾಲ್ಕು ಭಾಗಗಳಲ್ಲಿ ಮೊದಲ ಮೂರು ಭಾಗಗಳು ಗುಣ ಭಾಗಗಳಾಗಿದ್ದು, ನಾಲ್ಕನೆಯದು ಗುಣರಹಿತವಾದ ಭಾಗವಾಗಿದೆ. ಗುಣಚಕ್ರವನ್ನು ಕೆಳಗಿನ ಚಿತ್ರದಲ್ಲಿ ನೋಡಿರಿ.




ಗುಣಚಕ್ರ

ನಮ್ಮ ತಲೆಯಲ್ಲಿ ಕಾಣಿಸದಂತಿರುವ ಗುಣಚಕ್ರವನ್ನು ನೀನು ಹೇಗೆ ಪ್ರತ್ಯಕ್ಷವಾಗಿ ನೋಡುತ್ತಿದ್ದೀಯಾಯೆಂದು ನೀವು ಕೇಳಬೇಡಿರಿ. ನನ್ನ ಮೇಲಿನ ನಂಬಿಕೆಯಿಂದ ನೋಡಿರಿ. ಗತಜನ್ಮದಲ್ಲಿ, ಜೀವಿಯು ಮರಣಿಸಿದಾಗ ಯಾವ ಗುಣಭಾಗದಲ್ಲಿರುತ್ತಾನೋ, ಪುನಃ ಜನ್ಮಿಸುವಾಗ ಅದೇ ಗುಣದಲ್ಲಿದ್ದು ಜನ್ಮಿಸುತ್ತಾನೆ. ನಾಲ್ಕು ಭಾಗಗಳ ಗುಣಚಕ್ರದಲ್ಲಿ ಮೂರು ಭಾಗಗಳಲ್ಲಿ ಗುಣಗಳಿವೆ. ಈ ಮೂರು ಭಾಗಗಳಲ್ಲಿಯೇ ಗುಣರೂಪದಲ್ಲಿ ಮಾಯೆ ಇದೆ. ಮಧ್ಯದಲ್ಲಿನ

ನಾಲ್ಕನೆ ಭಾಗ ಗುಣಗಳು ಇಲ್ಲದ್ದಾಗಿ, ಗುಣ ರಹಿತ ಯೋಗ ಭಾಗವಾಗಿದೆ. ಮನುಷ್ಯ ಸಜೀವವಾಗಿ ಇರುವಾಗ, ಒಳಗಿನ ಜೀವಿಯು ಈ ನಾಲ್ಕು ಭಾಗಗಳಲ್ಲಿ ಎಲ್ಲಿಯೋ ಒಂದುಕಡೆ ಇರುತ್ತಾನೆ. ಮೂರು ಗುಣ ಭಾಗಗಳಲ್ಲಿ ಇರುವವರೆಗು ಮಾಯೆ ಅವನನ್ನು ಕಣ್ಣುಮುಚ್ಚಿಟ್ಟು ನಡೆಸುತ್ತಿದೆ. ಗುಣ ಮಾಯೆಯಲ್ಲಿ ಇರುವವನು ಯಜ್ಞಗಳು, ವೇದಾಧ್ಯಯನ, ತಪಸ್ಸು, ದಾನಗಳನ್ನು ಮಾಡುತ್ತಾನೆ ಆದರೇ ಯೋಗವನ್ನು ಮಾಡುವುದಿಲ್ಲ. ನಾಲ್ಕನೇ ಸ್ಥಾನದೊಳಗೆ ಹೋದವನು ಮಾತ್ರವೇ ಯೋಗವನ್ನು ಆಚರಿಸುತ್ತಾನೆ. ನಾಲ್ಕನೆ ಸ್ಥಾನ ಯೋಗಸ್ಥಾನ ಆದ್ದರಿಂದ, ಜೀವಿಯನ್ನು ಮುಚ್ಚಿಡುವ ಮಾಯೆ ಇಲ್ಲದಿರುವುದರಿಂದ ಅಲ್ಲಿ ಇರುವವನು ಯೋಗಿಯಾಗಿ ಯೋಗವನ್ನು ಆಚರಿಸುತ್ತಾನೆ. ಮೊದಲನೆಯದಾದ ತಾಮಸ ಗುಣಭಾಗದಲ್ಲಿರುವ ಜೀವಿಯನ್ನು ತಾಮಸನು ಎಂದು ಕರೆಯುತ್ತೇವೆ. ಹಾಗೆಯೇ ಎರಡನೆ ಭಾಗವಾದ ರಾಜಸ ಗುಣ ಭಾಗದಲ್ಲಿರುವ ಜೀವಿಯನ್ನು ರಾಜಸನು ಎಂದು ಕರೆಯುತ್ತೇವೆ. ಮೂರನೆ ಗುಣ ಭಾಗವಾದ ಸಾತ್ತ್ವಿಕದಲ್ಲಿರುವವನನ್ನು ಸಾತ್ತ್ವಿಕನು ಎಂದು ಕರೆಯುತ್ತೇವೆ. ಇನ್ನು ನಾಲ್ಕನೆ ಭಾಗದಲ್ಲಿರುವವನನ್ನು ಯೋಗಿ ಎಂದು ಕರೆಯುತ್ತೇವೆ.

ಇಲ್ಲಿ ನಿಮಗೆ ಚೆನ್ನಾಗಿ ಅರ್ಥವಾಗುವುದಕ್ಕೆ ಒಂದು ವಿಷಯವನ್ನು ಹೇಳುತ್ತೇನೆ ನೋಡಿರಿ. ನಾವು ಬರೆದ **"ಆಧ್ಯಾತ್ಮಿಕ ಪ್ರಶ್ನೆಗಳು-ಉತ್ತರಗಳು"** ಎನ್ನುವ ಗ್ರಂಥದಲ್ಲಿ ಇತರರು ನನ್ನನ್ನು "ನೀವು ಏನು ಓದಿಕೊಂಡಿದ್ದೀರ" ಎಂದು ಪ್ರಶ್ನಿಸಿದ್ದಾರೆ. ಅದಕ್ಕೆ ಉತ್ತರವಾಗಿ ನಾನು ಹೀಗೆ ಹೇಳಿದ್ದೇನೆ. "ಪ್ರಪಂಚ ಓದನ್ನು ಹೇಳಿದರೇ, ಹನ್ನೊಂದನೆಯ ತರಗತಿಯನ್ನು ಓದಿದ್ದೇನೆ. ಆಧ್ಯಾತ್ಮಿಕ ವಿದ್ಯೆಯಾದರೆ ಮೂರನೆ ತರಗತಿ ಮುಗಿದುಹೋಗಿ ನಾಲ್ಕನೇ ತರಗತಿಯೊಳಗೆ ಬಂದು, ನಾಲ್ಕನೆಯದು ಓದುತ್ತಿದ್ದೇನೆ. ನಾಲ್ಕನೆ ತರಗತಿ ಪೂರ್ತಿಯಾಗಿ ಓದಿದ ನಂತರ ಐದನೇ ತರಗತಿಗೆ ಹೋಗಬೇಕೆಂದುಕೊಳ್ಳುತ್ತಿದ್ದೇನೆ." ಅಲ್ಲಿ ನಾನು ಹಾಗೆ ಹೇಳಿರುವುದಕ್ಕೆ, ಈ ಗಾದೆಯನ್ನು ಸಮನ್ವಯ ಮಾಡಿಕೊಂಡು ನೋಡಿದರೆ ಮೂವರ ನಂತರ ಹುಟ್ಟಿದವನಾಗಿ ನನ್ನನ್ನು ಲೆಕ್ಕಿಸಬಹುದು. ತಾಮಸನು, ರಾಜಸನು, ಸಾತ್ತ್ವಿಕನು ಹುಟ್ಟಿದ ನಂತರ ಹುಟ್ಟಿದವನು ಯೋಗಿ ಆಗುತ್ತಾನೆ. ಯೋಗಿ ಆದವನನ್ನು ಮಾಯೆ ಏನು ಮಾಡುವುದಿಲ್ಲ. ನಾಲ್ಕನೆ

ಸ್ಥಾನದಲ್ಲಿ ಗುಣಗಳು ಇಲ್ಲ. ಆದ್ದರಿಂದ ಮಾಯೆಗೆ ಯೋಗಿಯನ್ನು ತನ್ನ ಮಡಿಕೆಯಲ್ಲಿ ಹಾಕಿ ಮುಚ್ಚುವುದಕ್ಕೆ ಮುಚ್ಚಳ ಇರುವುದಿಲ್ಲ. ಆದ್ದರಿಂದ ಮಾಯೆಗೆ ಯೋಗಿಯನ್ನು ತನ್ನ ಮಡಿಕೆಯಲ್ಲಿ ಹಾಕಿ ಮುಚ್ಚುವುದಕ್ಕೆ ಮೂಚ್ಚಳ ಇರುವುದಿಲ್ಲ. ಆದ್ದರಿಂದ ಗಾದೆಯಲ್ಲಿ ಮೂವರ ನಂತರ ಹುಟ್ಟಿದರೇ ಮುಚ್ಚುವ ಮುಚ್ಚಳ ಇರುವುದಿಲ್ಲ ಎಂದು ಹೇಳಿದ್ದಾರೆ. ಅಷ್ಟೇ ಹೊರತು ಪ್ರಪಂಚರೀತ್ಯಾ ದರಿದ್ರನೆಂದು ಅರ್ಥಮಾಡಿಕೊಳ್ಳಬಾರದು. ಗುಣಚಕ್ರದಲ್ಲಿನ ನಾಲ್ಕು ಭಾಗಗಳನ್ನು ದಾಟಿಹೋದರೆ ಆಚೆ ಐದನೆಯದಾಗಿರುವುದು ಅವಧಿಗಳಿಲ್ಲದ ಪರಮಾತ್ಮ. ಆದ್ದರಿಂದ ನಾಲ್ಕು ದಾಟಿದವನು ಮೋಕ್ಷವನ್ನು ಹೊಂದುತ್ತಿದ್ದಾನೆ. ಆ ವಿಷಯವನ್ನು ಗಾದೆಯಲ್ಲಿ ನಾಲ್ಕುಜನರ ನಂತರ ಹುಟ್ಟಿದರೆ ನಡುಮನೆ ಬಂಗಾರವಾಗುತ್ತದೆ." ಎಂದು ಹೇಳಿದ್ದಾರೆ. ಈ ಗಾದೆ ಅತ್ಯಂತ ಜ್ಞಾನ ಇರುವುದಾಗಿ ಇದೆ. ಮೂರು ಗುಣ ಭಾಗಗಳು ಮಾಯೆಗೆ ನಿಲಯವಾಗಿ ಇರುವುದರಿಂದ, ಮೂರು ನಂತರ ಹುಟ್ಟಿದರೇನೆಯೆಂದು ಮೂರನ್ನು, ಮಾಯೆಗೆ ಗುರುತಾಗಿ ಹೇಳಿದ್ದಾರೆ. ನಂತರ ಜನ್ಮರಾಹಿತ್ಯವನ್ನು ಹೊಂದಿದವನು ಶರೀರದಲ್ಲಿನ ಗುಣಚಕ್ರದಲ್ಲಿ ಇರದೆ, ಬಾಹ್ಯದಲ್ಲಿ ಎಲ್ಲಾಕಡೆ ವ್ಯಾಪಿಸಿರುವ ದೇವರಲ್ಲಿ ಬೆರೆತುಹೋಗುತ್ತಿದ್ದಾನೆ. ಆದ್ದರಿಂದ ಮೋಕ್ಷವನ್ನು ದೊಡ್ಡ ಬೆಲೆಯುಳ್ಳ ಬಂಗಾರದೊಂದಿಗೆ ಹೋಲಿಸುತ್ತಾ, ಅವನಮನೆ ಬಂಗಾರವಾಗುತ್ತದೆಯೆಂದು ಹೇಳಿದ್ದಾರೆ.

## 32. ಆಕಳಿಸಿದರೆ ಕರಳುಗಳನ್ನು ಲೆಕ್ಕವಿಟ್ಟಂತೆ.

ನಾನು ನೋಡಿದಮಟ್ಟಿಗೆ, ಬಹಳ ತಿಳುವಳಿಕೆಯುಳ್ಳವನನ್ನು ಕುರಿತು ಯಾರಾದರೂ ಹೇಳುವಾಗ ಅವನು ಆ ಕಳಿಸಿದರೇ ಕರಳನ್ನು ಲೆಕ್ಕಮಾಡುವ ಮೇಧಾವಿ ಎಂದು ಹೇಳುತ್ತಿರುತ್ತಾರೆ. ಅವರು ಹಾಗೆ ಹೇಳುವುದು ನನಗೆ ಬಹಳ ಆಶ್ಚರ್ಯವಾಯಿತು. ಏಕೆಂದರೇ ಅವರು ಹೇಳುವ ಗಾದೆ, ತಿಳುವಳಿಕೆ ಇಲ್ಲದವರನ್ನು ಕುರಿತು ಹೇಳುವುದು. ತಿಳುವಳಿಕೆ ಇಲ್ಲದವನನ್ನು ಕುರಿತು ಹೇಳುವಾಗ, ಆಕಳಿಸಿದರೇ ಕರಳನ್ನು ಲೆಕ್ಕಮಾಡುವ ವಿಧವೆಂದು ಪೂರ್ವದಲ್ಲಿ ಹೇಳುತ್ತಿದ್ದರು. ಏಕೆಂದರೇ! ಮನುಷ್ಯನ ಶರೀರದಲ್ಲಿ ಕರಳು ಎಷ್ಟೋ ಇರುವುದಿಲ್ಲ. 32 ಅಡಿಗಳ ಉದ್ದವಿರುವ ಒಂದೇ ಕರಳಿರುತ್ತದೆ. ಆಕಳಿಸಿದರೇ ಕರಳುಗಳ

ಲೆಕ್ಕಹೇಳುವವನಿದ್ದಾನೆಂದರೇ, ಅವನು ಏನು ತಿಳಿಯದವನೆಂದು ಅರ್ಥ. ಅಷ್ಟೇ ಅಲ್ಲ, ಅವನು ಸುಳ್ಳು ಹೇಳುವವನೆಂದು ಗುರುತು. ಆದ್ದರಿಂದ ಹೊಟ್ಟೆಯಲ್ಲಿಲ್ಲದ ಕರಳನ್ನು ಇಷ್ಟು ಇವೆಯೆಂದು ಹೇಳುವವನು ಕರಳು ಒಂದೇ ಇದೆಯೆಂದು ತಿಳಿಯದ ತಿಳುವಳಿಕೆ ಇಲ್ಲದವನೆಂದು, ಸುಳ್ಳು ಹೇಳುವವನೆಂದು ಎಲ್ಲರಿಗೂ ಅರ್ಥವಾಗಿಹೋಗುತ್ತದೆ. ಭಾವನೆಗೆ ವಿರುದ್ಧವಾಗಿ, ತಿಳುವಳಿಕೆಯುಳ್ಳ ಮೇಧಾವಿಯನ್ನು ಕುರಿತು ಹೇಳುವಾಗ ಈ ಗಾದೆಯನ್ನು ಬಳಸುವವರು ಕೂಡಾ ತಿಳುವಳಿಕೆ ಇಲ್ಲದವರಾಗಿ ಹೋಗಬಲ್ಲರು. ಆದ್ದರಿಂದ ಚೆನ್ನಾಗಿ ಆಲೋಚಿಸಿದರೇ 'ಆಕಳಿಸಿದರೇ ಹಲ್ಲನ್ನು ಲೆಕ್ಕಹಾಕುವವನೆಂದು", ಮೇಧಾವಿ ಯನ್ನು ಕುರಿತು ಹೇಳಬಹುದು. ತಿಳುವಳಿಕೆ ಇಲ್ಲದವನನ್ನು ಕುರಿತು ಹೇಳುವಾಗ, ಆಕಳಿಸಿದರೇ ಕರಳನ್ನು ಲೆಕ್ಕ ಇಟ್ಟಂತೆಯೆಂದು ಹೇಳಬಹುದು.

## 33. ಏನು ಅರೆಯದವನು ಏಕಾಸಿದಿನ ಸತ್ತರೆ, ಎಲ್ಲಾ ತಿಳಿದವನು ಅಮಾವಾಸ್ಯೆ ದಿನ ಸತ್ತನಂತೆ!

ಈ ಗಾದೆಯಲ್ಲಿ ಏನು ತಿಳಿಯದವನು, ಎಲ್ಲಾ ತಿಳಿದವನು ಎಂದು ಎರಡು ವಿಧದವರು ಇದ್ದಾರೆ. ಅಷ್ಟೇ ಅಲ್ಲದೇ ಏಕಾಸಿ(ಏಕಾದಶಿ) ಮತ್ತು ಅಮಾವಾಸ್ಯೆ ಎಂದು ಎರಡು ತಿಥಿಗಳು ಇವೆ. ಒಂದೇನೊ ಶುಕ್ಲಪಕ್ಷ ಏಕಾದಶಿ, ಎರಡನೆಯದು ಕೃಷ್ಣಪಕ್ಷ ಅಮಾವಾಸ್ಯೆ ಎಂದು ನೆನಪಿಟ್ಟುಕೊಳ್ಳಬೇಕು. ಇನ್ನು ಒಬ್ಬ ಬ್ರಹ್ಮಯೋಗಿಯನ್ನು ಏನು ಅರಿಯದವನೆಂದೂ, ಪ್ರಪಂಚ ವಿಷಯ ಗಳೆಲ್ಲವನ್ನು ತಿಳಿದು ಧ್ಯಾನವನ್ನು ಮಾಡುವವನನ್ನು, ಎಲ್ಲಾ ತಿಳಿದವನು ಎಂದೂ ನೆನಪಿಟ್ಟುಕೊಳ್ಳಬೇಕು. ಈಗ ಈ ಗಾದೆಯನ್ನು ವಿವರಿಸಿಕೊಂಡರೆ ಚೆನ್ನಾಗಿ ಅರ್ಥವಾಗುತ್ತದೆ. ಒಬ್ಬ ಬ್ರಹ್ಮಯೋಗಿ, ಕಣ್ಣು ಮುಚ್ಚಿಕೊಂಡು ಕುಳಿತುಕೊಂಡು ಬಾಹ್ಯ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳನ್ನು ಐದು ಧ್ಯಾಸಗಳು ಇಲ್ಲದಂತೆ ಪೂರ್ತಿಯಾಗಿ ಬ್ರಹ್ಮಯೋಗದಲ್ಲಿ ಲಗ್ನವಾಗಿದ್ದಾನೆ. ಮತ್ತೊಬ್ಬನು ಸನ್ಯಾಸತ್ತ್ವವನ್ನು ತೆಗೆದುಕೊಂಡು, ಕಾಷಾಯಬಟ್ಟೆಗಳು (ಕಾವಿ ಬಟ್ಟೆಗಳು) ಧರಿಸಿ ಸಂಸ್ಕೃತವನ್ನು ಕಲಿತು, ವೇದಗಳನ್ನು, ಪುರಾಣಗಳನ್ನು, ಉಪನಿಷತ್ತುಗಳನ್ನು ಕಂಠಾಪಾಠ ಮಾಡಿಕೊಂಡ ಧ್ಯಾನವನ್ನು ನಿತ್ಯವೂ ಮಾಡುತ್ತಾ, ಧಾರಾಳವಾಗಿ ಉಪನ್ಯಾಸಗಳು

ಹೇಳುತ್ತಾ, ದೊಡ್ಡ ಸ್ವಾಮೀಜಿಯಾಗಿ ಚಲಾವಣೆ ಆಗುತ್ತಿದ್ದಾನೆ. ಈ ವಿಧವಾಗಿ ಇಬ್ಬರು ವ್ಯಕ್ತಿಗಳು ದೈವಮಾರ್ಗವನ್ನು ಅನುಸರಿಸಬೇಕೆಂದುಕೊಂಡು, ಒಬ್ಬರು ಬ್ರಹ್ಮಯೋಗ ಸಾಧನೆ ಮಾಡಿದರೆ, ಮತ್ತೊಬ್ಬರು ಸ್ವಾಮಿಯಾಗಿ ಉಪನ್ಯಾಸ ಮೇಧಾವಿ ಎಂದು, ತಪಸ್ವಿ ಎಂದು ಹೆಸರು ಗಳಿಸಿದ್ದಾನೆ. ಸ್ವಲ್ಪಕಾಲ ಕಳೆದುಹೋದ ನಂತರ ಮೊದಲನೆಯವನು ಬ್ರಹ್ಮಯೋಗದಲ್ಲಿ ತನ್ನ ಕರ್ಮವೆಲ್ಲವನ್ನು ಜ್ಞಾನಾಗ್ನಿಯಲ್ಲಿ ಸುಟ್ಟುಕೊಂಡಿದ್ದಾನೆ. ಸನ್ಯಾಸಿಯಾದ ಎರಡನೆಯವನು ಸ್ವಾಮಿಯಾಗಿ, ಉಪನ್ಯಾಸಕರ್ತನಾಗಿ ಹೆಸರುವಾಸಿಯಾಗಿ ಪ್ರಜೆಗಳು, ಭಕ್ತರು ಕೊಟ್ಟಿರುವ ಒಡವೆಯನ್ನು ಉಳಿಸಿಕೊಂಡು ಕೋಟೀಶ್ವರನಾಗಿದ್ದಾನೆ. ಕಾಣಿಸುವ ಧನ ಕೈಗೂಡಿದಂತೆ, ಕಾಣಿಸದ ಕರ್ಮಕೂಡಾ ಉಳಿತಾಯವಾಗಿದೆ. ನಂತರ, ಬ್ರಹ್ಮಯೋಗಿಗೆ ಮರಣ ಬಂದು ಶುಕ್ಲಪಕ್ಷ ಏಕಾದಶಿ ದಿನ, ಹಗಲು ಹನ್ನೆರಡು ಗಂಟೆಗಳಿಗೆ, ಉತ್ತರಾಯಣದಲ್ಲಿ ಮರಣಿಸುವುದು ನಡೆದಿದೆ. ಆತನು ಯೋಗಿ ಆಗಿರುವುದರಿಂದ ದೇವರು ಭಗವದ್ಗೀತೆಯಲ್ಲಿ ಹೇಳಿದಂತೆ, ಮೋಕ್ಷ ಹೊಂದುವ ಕಾಲ ನಿಯಮದ ಪ್ರಕಾರ ಮರಣಿಸುವುದರಿಂದ, ಆತನು ಮರು ಜನ್ಮಕ್ಕೆ ಹೋಗದಂತೆ ದೇವರಲ್ಲಿ ಐಕ್ಯವಾಗಿ ಹೋಗಿದ್ದಾನೆ. ನಂತರ ಸ್ವಾಮಿ ಆದವನು ಅಮಾವಾಸ್ಯೆ ದಿನ ಮರಣಿಸಿದ್ದಾನೆ. ಮೋಕ್ಷವನ್ನು ಹೊಂದುವ ಕಾಲಕ್ಕೆ ಸರಿಹೋಗುವಂತೆ ಮರಣಿಸದೆ ಅಮಾವಾಸ್ಯೆ ದಿನ ಮರಣಿಸುವುದರಿಂದ, ಆತನು ಪುನಃ ಎರಡನೆ ಜನ್ಮಕ್ಕೆ ಹೋಗಬೇಕಾಗಿ ಬಂದಿದೆ. ಈ ಗಾದೆಯಲ್ಲಿ ಯೋಗಿಗೆ, ತಪಸ್ವಿಗೆ ಇರುವ ವ್ಯತ್ಯಾಸವನ್ನು ತೋರಿಸುವುದು ನಡೆದಿದೆ. ಎಷ್ಟು ತಪಸ್ವಿಯಾದರೂ, ಎಷ್ಟು ಧ್ಯಾನ ಮಾಡಿದರೂ, ಎಷ್ಟು ದೊಡ್ಡ ಸ್ವಾಮೀಜಿ ಆದರೂ ದೇವರತ್ತಿರ ಸ್ಥಳ ದೊರೆಯುವುದಿಲ್ಲವೆಂದು, ಮೋಕ್ಷ ಲಭಿಸುವುದಿಲ್ಲ ವೆಂದು, ಯೋಗಿಗೆ ಮಾತ್ರವೇ ಮೋಕ್ಷ ಲಭಿಸುತ್ತದೆಂದು ತಿಳಿಯುತ್ತಿದೆ.

## 34. ಏನು ಮಾಡುತ್ತಿದ್ದೀಯೋ ಎಂದರೆ, ಸುರಿದು ಎತ್ತಿಕೊಳ್ಳುತ್ತಿದ್ದೇನೆ ಎನ್ನುವಂತೆ

ಒಬ್ಬನು ದೈವಜ್ಞಾನದ ಮೇಲೆ ಆಸಕ್ತಿ ಇರುವವನಾಗಿ, ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಓದಿ ಪೂರ್ತಿ ಜ್ಞಾನವನ್ನು ತಿಳಿದುಕೊಂಡಿದ್ದಾನೆ. ಅದಕ್ಕು

ಮುನ್ನ ಸುಮಾರು ಹತ್ತು ಭಗವದ್ಗೀತೆಗಳನ್ನು ಓದಿದರೂ ತಿಳಿಯದ ಜ್ಞಾನ, ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಓದುವುದರಿಂದ ತಿಳಿದುಕೊಂಡಿದ್ದಾನೆ. ಅದರಿಂದ ಶರೀರದಲ್ಲಿ ನಡೆಯುವ ಯಂತ್ರಾಂಗವೆಲ್ಲವೂ ತಿಳಿದುಹೋಗಿದೆ. ಪ್ರತಿ ಮನುಷ್ಯ, ಗತ ಜನ್ಮಗಳಲ್ಲಿ ಮಾಡಿಕೊಂಡ ಕರ್ಮವನ್ನು ಅನುಭವಿಸುವುದಕ್ಕೆ ಹುಟ್ಟುತ್ತಿದ್ದಾನೆಂದು, ಹುಟ್ಟಿದವನು ಗತ ಜನ್ಮ ಕರ್ಮವನ್ನು ಒಂದೊಂದನ್ನು ಅನುಭವಿಸುತ್ತಿದ್ದೇನೆಂದು ತಿಳಿಯದೆ, ಕರ್ಮ ಅನುಭವಿಸುವುದಕ್ಕೆ, ಶರೀರದಲ್ಲಿ ಆತ್ಮ ಮಾಡಿಸಿದ ಕೆಲಸವನ್ನು, ಜೀವಿಯಾದ ತಾನು ಮಾಡದಿದ್ದರೂ, ಅಹಂ ಮಾತನ್ನು ಕೇಳಿ ಅಹಂಭಾವವನ್ನು ಹೊಂದಿ, ನಾನೇ ಮಾಡಿದ್ದೇನೆಂದು ಅಂದುಕೊಳ್ಳುವುದರಿಂದ, ಪುನಃ ಹೊಸ ಕರ್ಮ ಬರುವುದು ನಡೆಯುತ್ತಿದೆಯೆಂದು ತಿಳಿದುಕೊಂಡಿದ್ದಾನೆ. ತನಗೆ ಜ್ಞಾನ ತಿಳಿದಿರುವುದರಿಂದ, ಎಲ್ಲರೂ ತಿಳಿಯದೆ ಅವರು ಮಾಡದ ಕರ್ಮಗಳನ್ನು ಅನವಶ್ಯಕವಾಗಿ ನೆತ್ತಿ ಮೇಲೆ ಹಾಕಿಕೊಳ್ಳುತ್ತಿದ್ದಾರೆಂದು, ಹಾಗೆ ನಾನು ಹೊಸ ಕರ್ಮಗಳನ್ನು ಸಂಪಾದಿಸಿಕೊಳ್ಳದೆ, ಆತ್ಮ ಮಾಡಿಸುವ ಕೆಲಸಗಳನ್ನು ಮಾಡುತ್ತಾ ಅದರಲ್ಲಿನ ಸುಖದುಃಖಗಳನ್ನು ಅನುಭವಿಸಿ, ಹಳೆಕರ್ಮವನ್ನು ಮುಗಿಸಿಕೊಳ್ಳುತ್ತೇನೆಂದು ಅಂದುಕೊಂಡಿದ್ದಾನೆ. ಆತನು ಅಂದುಕೊಂಡಿರುವುದು ಕರ್ಮಯೋಗಕ್ಕೆ ಸಂಬಂಧಿಸಿದ ಜ್ಞಾನ. ಆದ್ದರಿಂದ ತಾನು ಮಾಡುತ್ತಿರುವ ಕೆಲಸಗಳನ್ನು, ನಿತ್ಯವೂ ಎಚ್ಚರದಿಂದ ಮಾಡಿದರೆ ಹಳೆಕರ್ಮ ಮುಗಿದುಹೋಗುತ್ತದೆ, ಹೊಸಕರ್ಮ ಬಾರದಂತೆ ಹೋಗುತ್ತದೆ.

ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಓದಿ, ಸುಲಭವಾಗಿ ಕರ್ಮ ಯೋಗವನ್ನು ಗ್ರಹಿಸಿದ ಆತನು ಪ್ರತಿನಿತ್ಯ ಕೆಲಸಗಳು ಮಾಡುತ್ತಿರುವಾಗ, ತಾನು ತಿಳಿದುಕೊಂಡ ಸೂತ್ರದ ಮೇಲೆ ಎಚ್ಚರವಿಲ್ಲದೆ ಮರೆತುಹೋಗಿ, ಚಿಕ್ಕಂದಿನಿಂದ ಇರುವ ಅಭ್ಯಾಸದ ಪ್ರಕಾರ, ಮಾಡಿದ ಕೆಲಸವನ್ನು ತಾನೇ ಮಾಡಿದ್ದೇನೆಂದು ಅಂದುಕೊಳ್ಳುವುದು ನಡೆಯುತ್ತಿತ್ತು. ಕೆಲಸ ನಡೆದುಹೋದ ನಂತರ, ಭಗವದ್ಗೀತೆ ಜ್ಞಾನವನ್ನು ಜ್ಞಾಪಕ ತಂದುಕೊಂಡು ತನ್ನ ಭಾವನೆಯಲ್ಲಿ, ಕೆಲಸ ಮಾಡುತ್ತಿರುವಾಗ ನಾನೇ ಮಾಡುತ್ತಿದ್ದೇನೆಂದು ಅಂದುಕೊಳ್ಳುವುದರಿಂದ, ಅದರಲ್ಲಿನ ಕರ್ಮ ಬಂದಿದೆಯೆಂದು ಆತನಿಗೆ ಅರ್ಥವಾಗುತ್ತಿತ್ತು. ಹೀಗೆ ಕೆಲಸವನ್ನು ಮಾಡುತ್ತಿರುವಾಗ ಕರ್ಮಯೋಗ ಜ್ಞಾಪಕ ಇರಬೇಕೆಂದು ಅಂದುಕೊಂಡರೂ ಮಾಡುತ್ತಿರುವ

ಸಮಯದಲ್ಲಿ ಕರ್ಮಯೋಗ ಧ್ಯಾಸಹೋಗಿ, ಕೆಲಸದಮೇಲೆ ಧ್ಯಾಸ ಬರುವುದರಿಂದ ಕೆಲಸವನ್ನು ತಾನೇ ಮಾಡುವಂತೆ ಭಾವನೆ ತಿಳಿಯದೆಯೇ ಬರುತ್ತಿದೆ. ಹಾಗೆ ಕರ್ಮಯೋಗ ಧ್ಯಾಸ ಇಲ್ಲದೇಹೋಗಿ, ಅಹಂ ಒಂದರ ಭಾವನೆ ಬರುವುದರಿಂದ, ಹೊಸ ಕರ್ಮ ಬರುತ್ತಿದೆಯೆಂದು ಆತನಿಗೆ ಒಂದುಕಡೆ ಅರ್ಥವಾಗುತ್ತಿದೆ. ಈ ವಿಧವಾಗಿ ಕರ್ಮಯೋಗಕ್ಕೆ ಪ್ರಯತ್ನ ಮಾಡುವ ಸಮಯದಲ್ಲಿ, ಒಬ್ಬ ಯೋಗಿ ಬಂದು ನೀನು ಏನು ಮಾಡುತ್ತಿದ್ದೀಯಾ ಎಂದು ಭಗವದ್ಗೀತೆ ಜ್ಞಾನಿಯನ್ನು ಪ್ರಶ್ನಿಸಿದ್ದಾನೆ. ಆಗ ಆತನು "ಸುರಿದು ಎತ್ತುಕೊಳ್ಳುತ್ತಿದ್ದೇನೆ ಎಂದನಂತೆ". ಆ ಮಾತು ಕೇಳಿದ ಯೋಗಿಗೆ ಆತನಮಾತು ಅರ್ಥವಾಗಿ ನಕ್ಕಿದ್ದಾನಂತೆ, ಕರ್ಮವನ್ನು ತಲೆಯಿಂದ ಅನುಭವಗಳ ರೂಪದಲ್ಲಿ ಸುರಿದು ಹಾಕುತ್ತಾ, ಅಹಂನಿಂದ ಅವುಗಳನ್ನೇ ಹೊಸದಾಗಿ ಪುನಃ ತಲೆಗೆ ಎತ್ತಿಕೊಳ್ಳುತ್ತಿರುವಂತೆ. ಗೀತಾ ಜ್ಞಾನಿ ಹೇಳಿದಂತೆ ನಮಗು ಕೂಡಾ ಸ್ವಲ್ಪ ಅರ್ಥವಾಗಿದೆ. ಪ್ರಯತ್ನ ಮಾಡುತ್ತಿರುವ ಕರ್ಮಯೋಗಿ ಆದವನು, ತನ್ನ ವಿಷಯವನ್ನು ತಿಳಿಸುವುದಕ್ಕೆ ಆ ಮಾತನ್ನೇ ಗಾದೆಯಾಗಿ ಹೇಳಿದ್ದಾನೆ. ಚೆಲ್ಲಿ ಎತ್ತಿಕೊಳ್ಳುವುದು ಆತನೊಬ್ಬನೇ ಅಲ್ಲ ಪ್ರತಿ ದಿನವೂ ಅದೇ ಕೆಲಸವನ್ನು ನಾವು ಕೂಡಾ ಮಾಡುತ್ತಿದ್ದೇವೆ. ಈ ಮಧ್ಯದಲ್ಲಿ ನನಗೆ ವಯಸ್ಸು ಬೆಳೆದಿರುವುದರಿಂದ, ಸ್ವಲ್ಪ ದೃಷ್ಟಿ ಕಡಿಮೆಯಾಗಿ ಸರಿಯಾಗಿ ಕಾಣಿಸುತ್ತಿಲ್ಲ. ಹಾಗೇ ಪೂರ್ತಿ ಕೇಳಿಸುವುದೂ ಇಲ್ಲ. ಆದ್ದರಿಂದ ನನ್ನನೆತ್ತಿಯಿಂದ ಕೆಳಗೆ ಬಿದ್ದುಹೋದವುಗಳನ್ನು, ದೃಷ್ಟಿ ಸರಿಯಾಗಿ ಇಲ್ಲದಿರುವುದರಿಂದ ಎಲ್ಲಿ ಬಿದ್ದಿವೆಯೋ ತಿಳಿಯದೆ ಪೂರ್ತಿಯಾಗಿ ಎತ್ತಿಕೊಳ್ಳದೆ ಹೋಗುತ್ತಿದ್ದೇನೆ. ಆದ್ದರಿಂದ ನಾನು ನಷ್ಟಹೋಗುತ್ತಿದ್ದೇನೆಂದು ಸಂತೋಷಪಡಬೇಕಾ ಅಥವಾ ದುಃಖಪಡಬೇಕ ನೀವೇ ಹೇಳಿರಿ.

ನೋಡಿದಿರಾ! ಹಿರಿಯರು ನಮ್ಮ ಭಾಷೆಯಲ್ಲಿ ಎಷ್ಟುದೊಡ್ಡ ಜ್ಞಾನ ಇರುವ ಗಾದೆಗಳನ್ನು ಹೇಳಿದ್ದಾರೊ? ಅವುಗಳನ್ನು ಬಿಚ್ಚಿ ಹೇಳಿಕೊಳ್ಳದೆ ಹೋದರೆ, ಅವರ ಶ್ರಮವೆಲ್ಲಾ ವ್ಯರ್ಥವಾಗುತ್ತಿದೆ. ಹಾಗಾಗದಂತಿರುವುದಕ್ಕೆ, ನನಗೆ ತಿಳಿದಿರುವುದು ತಿಳಿದಂತೆ ಹೇಳಿದ್ದೇನೆ.

**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,**

**ಸತ್ಯವನ್ನು ಸಾವಿರ ಜನ ಅಲ್ಲಗಳೆದರೂ ಅದು ಅಸತ್ಯವಲ್ಲ.**

# ಗಾದೆಗಳ ಜ್ಞಾನ

## ಇಂದೂ (ಹಿಂದೂ) ಮತದಲ್ಲಿ ಸಿದ್ಧಾಂತಕರ್ತರು



ಅದ್ವೈತ ಸಿದ್ಧಾಂತಕರ್ತ ಆದಿ ಶಂಕರಾಚಾರ್ಯರು
Birth:509 BC - Death:477 BC (32 Years) ಕೇರಳ



ವಿಶಿಷ್ಟಾದ್ವೈತ ಸಿದ್ಧಾಂತಕರ್ತ ರಾಮಾನುಜಾಚಾರ್ಯರು
Birth : 1017 – Death : 1137 (120 years) ತಮಿಳನಾಡು



ದ್ವೈತ ಸಿದ್ಧಾಂತಕರ್ತ ಮಧ್ವಾಚಾರ್ಯರು
Birth : 1238 – Death : 1317 (79 years) ಕರ್ನಾಟಕ



ತ್ರೈತ ಸಿದ್ಧಾಂತ ಆದಿಕರ್ತ ಪ್ರಬೋಧಾನಂದ ಯೋಗೀಶ್ವರರು
Birth : 1950 ಆಂಧ್ರಪ್ರದೇಶ್ (ರಾಯಲಸೀಮ)

Author : The Only Guru of Three Religions The Spiritual Emperor, Thraitha Theorem Originator

**Sri Acharya Prabodhananda Yogeeshwarulu**